# ಕೊಡಗು  ಸಂಗಾತಿ


ಮಾರ್ಚ್ 1 ರಿಂದ 31, 2004 ಪಾಕ್ಷಿಕ ಪತ್ರಿಕೆ (ಮಾಯಿ 17-30, ಸುಗ್ಗಿ 1-17 )

12058, ಸಂಗಾತಿ ನಿಲಯ, ವಿಜಯನಗರ 4ನೇ ಹಂತ, 2ನೇ ಘಟಕ, ಹಿನ್‌ಕಲ್ ಅಂಚೆ, ಮೈಸೂರು - ೫೭೦ ೦೧೭

ಸಂಪಾದಕಿ : ಪಟ್ಟಡ ಶೀಲಾಮಣಿ RNI No. : 10-01-96 TCI Kar. 09592 ಕನ್ನಡ ಮತ್ತು ಅರೆಭಾಷೆಲಿ ಪ್ರಕಟಿತ

KA / SK / MYS / 88 / 2003-05, ಸಂಪುಟ : 7 ಸಂಚಿಕೆ : 23-24 ಪುಟಗಳು : 24 ಬೆಲೆ : 12-00 ರೂ.




















: ಲೇಖನ ಒಳಪುಟದಲ್ಲಿ

ಅಯೋಧ್ಯೆಯಲ್ಲಿ ಉತ್ಖನ್ನದ ವೇಳೆ ಲಭಿಸಿದ
ಐತಿಹಾಸಿಕ ರಾಮ ಮಂದಿರದ ಕುರುಹುಗಳು.

## ಅಗಲಿದ ವೀರ ಯೋಧರ ಸಂಸಾರಕ್ಕೆ ಕೊಡವ ಸಮಾಜದಿಂದ ಸನ್ಮಾನ



28-1-04 ರಂದು ಬೆಂಗಳೂರಿನ ಕೊಡವ ಸಮಾಜ ಸಮಾರಂಭದಲ್ಲಿ ಶ್ರೀ ಅರುಣ್ ಮಾಚಯ್ಯನವರಿಂದ ಸನ್ಮಾನ ನೆನಪಿನ ಕಾಣಿಕೆ ಸ್ವೀಕರಿಸುತ್ತಿರುವ ಶ್ರೀಮತಿ ಕುಯ್ಯಮುಡಿ ಕವಿತಾ ಬೆಳ್ಳಿಯಪ್ಪ ಮತ್ತು ಪುತ್ರರು.

ಕೊಡಗಿನ ವೀರ ಯೋಧರು ದೇಶರಕ್ಷಣೆಯಲ್ಲಿ ತೊಡಗಿದ ಸಂದರ್ಭದಲ್ಲಿ ತಾಯ್ನಾಡಿಗೆ ಪ್ರಾಣಾರ್ಪಣೆ ಮಾಡಿದವರ ಪತ್ನಿ ಮಕ್ಕಳನ್ನು, ತಂದೆ ತಾಯಿಯರನ್ನೂ ಬೆಂಗಳೂರಿನ ಕೊಡವ ಸಮಾಜವು ಮರಣೋತ್ತರ ಸನ್ಮಾನ ನೀಡಿ ದಿವಂಗತರ ಸಂಸಾರವನ್ನು ಸನ್ಮಾನಿಸಲಾಯಿತು.

ಈ ಪ್ರಯುಕ್ತ ಪಿರಿಯಾಪಟ್ಟಣ ತಾಲ್ಲೂಕಿನ ಲಿಂಗಾಪುರ ಗ್ರಾಮದ ಕುಯ್ಯಮುಡಿ ದಿ. ಸುಭೇದಾರ್ ಬೆಳ್ಳಿಯಪ್ಪನವರ ತಂದೆ, ತಾಯಿ ಪತ್ನಿ, ಹಾಗೂ ಮಕ್ಕಳನ್ನು ಸನ್ಮಾನಿಸಿದರು. ಇವರೆಲ್ಲರೂ ಕೊಡವ ಸಮಾಜದ ಆತಿಥ್ಯಕ್ಕೆ ಬಾಜನರಾಗಿದ್ದಾರೆ. ಸನ್ಮಾನ ಹಾಗೂ ನೆನಪಿನ ಕಾಣಿಕೆಯಾಗಿ ರೂಪಾಯಿ 5000/- ದ ಚೆಕ್ಕನ್ನು ನೀಡಿರುತ್ತಾರೆ. ದಿ. ಬೆಳ್ಳಿಯಪ್ಪನವರ ಪರಿಚಯ ವಿವರವನ್ನು ಕೊಡಗು ಸಂಗಾತಿ ತನ್ನ ಸಂಪುಟ 6 ರ ಸಂಚಿಕೆ 11-12 ಸೆಪ್ಟಂಬರ್ 2002 ರ ಮುಖಪುಟದಲ್ಲಿ ಮುದ್ರಿಸಿ ಗೌರವ ಸೂಚಿಸಿತು.

- ಅಶ್ವತ್ ಕುಮಾರ್, ಲಿಂಗಾಪುರ ಗ್ರಾಮ.

## ಅಭಿನಂದನೆಗಳು



ಕೆ. ಕೆ. ಸುಕುಮಾರ ಗೌಡ, B.E. (Mech)
ಮತ್ತು
ಕೆ. ಜಿ. ಮೀರಾ B.E., (E&C)

ದಿನಾಂಕ 14-12-2003 ರಂದು ಭಾನುವಾರ ಮಡಿಕೇರಿಯ ಮೇಲಿನ ಗೌಡ ಸಮಾಜದಲ್ಲಿ ಅಗ್ನಿ ಸಾಕ್ಷಿಯಾಗಿ ದಂಪತಿಗಳಾದ ಈ ಸಂದರ್ಭದಲ್ಲಿ ಬಂದು ಬಳಗದವರು, ನೆಂಟರಿಷ್ಟರು, ಆಪ್ತರು ಸರ್ವರು ಬಂದು ಆಶೀರ್ವದಿಸಿದಿರಿ. ನಮಗೆ ಸಂತೋಷವನ್ನು ನೀಡಿದೆ. ನಮ್ಮ ಕುಲಗುರು ವೆಂಕಟರಮಣ ಮತ್ತು ತಾಯಿ ಶಾರದಾಂಬೆಯರ ಕೃಪಾ ಕಟಾಕ್ಷ ಸದಾ ಇದ್ದು ಐಶ್ವರ್ಯ ಆಯುರಾರೋಗ್ಯ ಸುಖ ಸಂಪತ್ತು ನೀಡಿ ಅನುಗ್ರಹಿಸಲಿ ಎಂದು ನಾವ್‌ಗಳು ಈ ಮೂಲಕ ಶುಭ ಹಾರೈಸುತ್ತೇವೆ.

*ಯಿಂದ : ಕಾಳೀರಮ್ಮನ ಶ್ರೀಮತಿ ಭಾಗೀರಥಿ ಗಣಪತಿ ಮತ್ತು ಮಗಳು ನಮಿತ ಗಣಪತಿ, ಮಂಡ್ಯ. ದೂರವಾಣಿ : 223700*

## ಮಹಾ ಭಾರತ ಪರೀಕ್ಷೆಯಲ್ಲಿ ವಂದನಾ ಕೊಡಗು ಜಿಲ್ಲೆಗೆ ಪ್ರಥಮ.



ಪಟ್ಟೆಮನೆ ವಂದನಾ ಶೇಷಪ್ಪ

ಬೆಂಗಳೂರಿನ ಭಾರತ ಸಂಸ್ಕೃತಿ ಪ್ರತಿಷ್ಠಾನದ ವತಿಯಿಂದ ಕಳೆದ ಸಾಲಿನಲ್ಲಿ ಆಯೋಜಿತವಾಗಿದ್ದ ಪ್ರೌಢಶಾಲಾ ವಿಭಾಗದ ಮಹಾಭಾರತ ಪರೀಕ್ಷೆಯಲ್ಲಿ ವಂದನಾ ಅವರು ಜಿಲ್ಲೆಗೆ ಪ್ರಥಮ ಸ್ಥಾನ ಪಡೆದು ಕೀರ್ತಿ ತಂದಿರುತ್ತಾರೆ.

ಕೊಡಗರಳ್ಳಿ ಶಾಂತಿನಿಕೇತನ ಆಂಗ್ಲ ಮಾಧ್ಯಮ ಪ್ರೌಢಶಾಲೆಯಲ್ಲಿ 8 ನೇ ತರಗತಿಯಲ್ಲಿ ವ್ಯಾಸಂಗ ಮಾಡುತ್ತಿರುವ ವಂದನಾ ಅವರು ಸುಂಟಿಕೊಪ್ಪದ ಜಮೀನ್ದಾರ ಪಟ್ಟೆಮನೆ ಶೇಷಪ್ಪ ಮತ್ತು ಡೀಸಮ್ಮ ದಂಪತಿಗಳ ಪುತ್ರಿಯಾಗಿದ್ದಾರೆ. ಪಟ್ಟೆಮನೆ ಶೇಷಪ್ಪ ದಂಪತಿಗಳು ಈ ಹಿಂದೆ ಕೊಡಗು ಸಂಗಾತಿ ಪತ್ರಿಕೆಯ ಅಭಿವೃದ್ಧಿಗಾಗಿ ಜೀವಾವಧಿ ಸದಸ್ಯತನ ನೀಡಿ ಸಹಕರಿಸಿರುತ್ತಾರೆ.

-ಸಂಗಾತಿ.

*ವಿನಂತಿ :* ತಾವುಗಳು ಕೊಡಗು ಸಂಗಾತಿ ಪತ್ರಿಕೆಯನ್ನು ಹೃದಯಪೂರ್ವಕವಾಗಿ ತರಿಸಿಕೊಂಡು ಪತ್ರಿಕಾಭಿವೃದ್ಧಿಗಾಗಿ ಸಹಕರಿಸುತ್ತಿದ್ದೀರಿ. ಇನ್ನು ಮುಂದಕ್ಕೆ ತಾವು ತಮ್ಮ ವಿಳಾಸ ದೂರವಾಣಿ ಸಂಖ್ಯೆ ಬದಲಾದಾಗ ಖಂಡಿತ ತಾವುಗಳಿಗೆ ಅಂಚೆ ಕಾರ್ಡಿನಲ್ಲಿ ಅಥವಾ ದೂರವಾಣಿ ಮೂಲಕ ತಿಳಿಸಲು ದಯವಿಟ್ಟು ಮರೆಯಲಾರಿರಿ ಎಂದು ಆಶಿಸುವ ನಿಮ್ಮವನೇ ಆದ

-ಸಂಗಾತಿ.



# 2004, ಮಾರ್ಚ್ 1 ರಿಂದ 31ರ ತನಕ






| | |
| --- | --- |
|  ಚಂದಾ ಕಳುಹಿಸುವ ಮತ್ತು ಜಾಹೀರಾತು ಪ್ರಸಾರ ಕಛೇರಿ ಮತ್ತು ಕೋರಿಯರ್ ಸರ್ವಿಸ್ ಇತ್ಯಾದಿ | ಕೊಡಗು ಸಂಗಾತಿ, 12058, ಸಂಗಾತಿ ನಿಲಯ, ವಿಜಯನಗರ 4ನೇ ಹಂತ, 2ನೇ ಘಟಕ, ಹಿನಕಲ್ ಅಂಚೆ, ಮೈಸೂರು - 17. ಫೋನ್: **0821/2404290**<br>ಕುಂಟುಪುಣಿ ರಾಮಕೃಷ್ಣ, ಕಾವೇರಿ ಆಟೋಮೊಬೈಲ್, ರಿಂಗ್‌ರೋಡ್ ಸರ್ಕಲ್, ಹಿನಕಲ್ ಅಂಚೆ, ಮೈಸೂರು - 17 **Mobile : 94483-90855** |
|  ಮಡಿಕೇರಿಯಲ್ಲಿ ಸಂಗಾತಿ ಕಛೇರಿ ಚಿಪ್ಪೆ, ಹಸೆಮಣೆ ಪುಸ್ತಕ / ಚಾಂಪಾ ಶುಭಾಶಯ ಕಾರ್ಡ್ಸ್ / ಕುರುಂಜಿಯವರ ಕ್ಯಾಸೆಟ್ಸ್, ಅಮರಶ್ರೀ ಸ್ಮರಣ ಸಂಚಿಕೆ ಇತ್ಯಾದಿ ಲಭ್ಯ. : | ಕೊಡಗು ಸಂಗಾತಿ C/o ಪಾಂಡನ ಕಾಂಪೌಂಡ್, 21/4, (1), ಅಪ್ಪಯ್ಯ ಗೌಡ ರಸ್ತೆ, ಜೂನಿಯರ್ ಕಾಲೇಜು ಹತ್ತಿರ, ಮಡಿಕೇರಿ - 571 201<br>ಬೈತಡ್ಕ ಜಾನಕಿ ಬೆಳ್ಯಪ್ಪ ಫೋನ್ : 228047<br>ಪಾಂಡನ ರತಿ ಚಂದ್ರಶೇಖರ್ ಫೋನ್ : **228380** |
|  ವಿರಾಜಪೇಟೆ | ಬಾರಿಕೆ ಮನೋಜ್‌ಕುಮಾರ್, ಇಗ್ಗುತ್ತಪ್ಪ ಕೋಲ್ಡ್ ಸ್ಟೋರ್, ಖಾಸಗಿ ಬಸ್ ನಿಲ್ದಾಣ, ವೀರಾಜಪೇಟೆ ಫೋನ್ : 08274/256591 |
|  ಕುಶಾಲ ನಗರ | ಕುಂಭಗೌಡನ ಸೋಮಣ್ಣ, ಮಯೂರ ಕೋಲ್ಡ್ ಸ್ಟೋರೇಜ್, ಮುಖ್ಯ ರಸ್ತೆ, ಕುಶಾಲನಗರ - 571 234 ಫೋನ್ : 08276/273370 |
|  ಬೆಂಗಳೂರು ಮಹಾನಗರ | ನಂಗಾರು ಮೋದನ ಪ್ರಿಯ, ನಂ. 11, ಮೊದಲನೆ ಅಡ್ಡ ರಸ್ತೆ, ಪೆಮ್ಮಯ್ಯ ಬ್ಲಾಕ್, ಜೇಸಿನಗರ, ಬೆಂಗಳೂರು -560 006 Mobile : 94482 25160 |

ಚಂದಾ ವಿವರ : ಜೀವಾವಧಿ ಸದಸ್ಯತನ - **2000** ರೂ. ವಾರ್ಷಿಕ ಚಂದಾ - **150** ರೂ. (ಅಂಚೆ ವೆಚ್ಚ ಸೇರಿ),

**ಕೊಡಗು ಸಂಗಾತಿಯನ್ನು ಒಲೆಗೊಂದರಂತೆ ಸದಸ್ಯರಾಗಿ ಕೊಂಡು ಓದಲು ಮರೆಯದಿರಿ.**

# ಸಂಪಾದಕೀಯ : ಚುನಾವಣೆ

ನಮ್ಮ ದೇಶದಲ್ಲಿ ಚುನಾವಣೆಗಳು ದೇಶದ ಜನರ ಚುನಾಯಿತ ಸದಸ್ಯರನ್ನು 5ವರ್ಷಕ್ಕೊಂದಾವರ್ತಿ ಆರಿಸುವು ದೆಂದು ಭಾರತೀಯ ಸಂವಿಧಾನದಲ್ಲಿದ್ದರೂ ಈಗೀಗ ನಮ್ಮ ರಾಜಕೀಯ ಪಕ್ಷಗಳು ದುರ್ಬಲ ಗೊಂಡಿದ್ದರಿಂದ ಅವುಗಳು ರಾಜ್ಯದ ಹಾಗೂ ಕೇಂದ್ರದ ಆಡಳಿತವನ್ನು ಹಿಡಿದುಕೊಳ್ಳುವ ಆತುರದಿಂದ 5 ವರ್ಷ ಕಳೆಯುವುದರೊಳಗೆ ಚುನಾವಣೆ ಮಾಡಿತ್ತಿರುವುದು ನಮ್ಮ ದೇಶದ ಜನರ ದುರಾದೃಷ್ಟಕರ ಸಂಗತಿಯಾಗಿದೆ.

ಇದಕ್ಕೆ ನಮ್ಮ ಜನತೆ ಪ್ರಜಾಪ್ರಭುತ್ವದ ಜವಾಬ್ದಾರಿ ಯನ್ನು ಅರಿಯದಿರುವುದೇ ಮುಖ್ಯ ಕಾರಣವಾಗಿದೆ. ಜನರು ಒಂದು ನಿರ್ದಿಷ್ಟ ಪಕ್ಷಕ್ಕೆ ಒಲವು ತೋರಿಸದೆ ಇರುವುದೇ ಇದಕ್ಕೆ ಮುಖ್ಯ ಕಾರಣವಾಗಿದೆ. ರಾಜಕಾರಣಿಗಳು ದಿನಕ್ಕೊಂದು ಪಕ್ಷ ಕೂಡಿ ತಮ್ಮ ವ್ಯಕ್ತಿಗತವಾದ ಪ್ರತಿಷ್ಠತೆಯನ್ನು ಉಳಿಸಿಕೊಳ್ಳಲು ಹವಣಿಸುವುದಕ್ಕೆ ಪುಷ್ಟಿಕರಿಸುವುದಕ್ಕೆ ಈ ರೀತಿಯ ಅ ಸ್ಥಿರತೆಯ ರಾಜಕೀಯ ದೊಂಬರಾಟಕ್ಕೆ ಕಾರಣವಾಗಿದೆ. ಸ್ವಾತಂತ್ರ್ಯ ಬಂದು 57 ವರ್ಷ ಕಳೆದರೂ ಒಂದು ಸ್ಥಿರವಾದ ಪಕ್ಷ ಬೆಳೆಯಲು ಯಾ ಬೆಳೆಸಲು ಸಾಧ್ಯವಾಗಿಲ್ಲ. ರಾಜಕೀಯ ಪಕ್ಷಗಳಲ್ಲಿ ನಿರ್ದಿಷ್ಟವಾದ ರಾಜಕೀಯ ತತ್ವಗಳಿಲ್ಲದಿರುವುದೇ ಇದಕ್ಕೆ ಕಾರಣವಾಗಿದೆ. ಅದೂ ಅಲ್ಲದೆ ನಮ್ಮ ಜನಸಂಖ್ಯೆ ಆಧಾರದ ಮೇಲೆ ಜನ ವಿದ್ಯಾವಂತರಾಗಿ ತಮ್ಮ ಕರ್ತವ್ಯವೇನೆಂಬುದನ್ನು ತಿಳಿದುಕೊಳ್ಳುವ ಬುದ್ಧಿವಂತರು ಇಲ್ಲದಿರುವುದೇ ಇದಕ್ಕೆ ಕಾರಣ. ಬೇರೆ ಅಭಿವೃದ್ಧಿ ರಾಷ್ಟ್ರಗಳಲ್ಲಿ ರಾಜಕೀಯ ಪ್ರಜ್ಞೆ ಬಂದಂತೆ ಇಲ್ಲಿಯೂ ಬರಬೇಕಾದರೆ ಇನ್ನೂ ನೂರು ವರ್ಷ ಬೇಕು ಎಂದು ಸಂಗಾತಿ ಸಂಶಯಪಡುತ್ತಿದೆ

## ಕಾಫಿ ಚಹದ ಬೆಲೆ ಹೆಚ್ಚಳ

*ಕರ್ನಾಟಕ ಸರ್ಕಾರ ಕೆಲವು ದಿನಗಳಿಂದ ಹಾಲಿನ ಬೆಲೆ ಹೆಚ್ಚಿಸಿದುದರಿಂದ ಹೋಟೇಲುಗಳಲ್ಲಿ ಕರ್ನಾಟಕಾದ್ಯಂತ ಮೂರು ರೂಗೆ ಸಿಗುತ್ತಿದ್ದ ಕಾಫಿಯ ಬೆಲೆ ಈಗ 3-50 ಪೈಸೆಗೆ ಮಾರಾಟವಾಗುತ್ತಿದೆ. ಕಾಫಿ ಬೀಜದ ಬೆಲೆ ಕುಸಿದಿದ್ದರೂ ಹೋಟೇಲುಗಳು ಕಾಫಿಯ ಬೆಲೆಯನ್ನು ಕಮ್ಮಿ ಮಾಡಿರಲಿಲ್ಲ. ಹಾಲಿನ ಬೆಲೆ ಲೀಟರಿಗೆ ಒಂದು ರೂ ಹೆಚ್ಚಿಸಿದಾಗ ಹೋಟೇಲಿನವರು ಒಂದು ಕಾಫಿಗೆ 50 ಪೈಸೆ ಹೆಚ್ಚಿಸಿರುವುದು ನ್ಯಾಯವೆ? ಗ್ರಾಹಕರು ಈ ವಿಷಯದಲ್ಲಿ ಚಿಂತಿಸಬೇಕಾದ ಅವಶ್ಯಕತೆ ಇದೆ ಕಾಫಿ ಬೀಜದ ಬೆಲೆ ಅರ್ಧಕ್ಕಿಂತ ಕಡಿಮೆಯಾದಾಗ ಹೋಟೇಲಿನ ಕಾಫಿಯ ಬೆಲೆಯನ್ನು ಹಿಂದಿನಷ್ಟೇ ಮುಂದುವರಿಸಿಕೊಂಡು ಬಂದು ಈಗ ಹಾಲಿನ ಬೆಲೆ ಹೆಚ್ಚಾಗಿದೆ ಎಂಬ ಕಾರಣಕ್ಕಾಗಿ 50 ಪೈಸೆ ಹೆಚ್ಚಿಸಿರುವ ಕಾರಣ ನ್ಯಾಯಬದ್ಧವಾಗಿದೆಯೇ? ಈ ರೀತಿ ಬೆಲೆ ಹೆಚ್ಚಿಸಿರುವುದು ವ್ಯಾಪಾರಿಗಳೇ ಹೊರತು ಯಾವುದೇ ರೀತಿಯ ಬೆಲೆ ಹೆಚ್ಚಳದ ಮಾಪನವನ್ನು ಅಳವಡಿಸಿಲ್ಲ. ಈ ರೀತಿ ಆಗುವುದರಿಂದ ಗ್ರಾಹಕ ಹಾಗೂ ಉತ್ಪಾದಕರಿಗೆ ನಷ್ಟವೇ ಹೊರತು ಲಾಭ ಏನೂ ಇಲ್ಲ. ಆದರಿಂದ ಉತ್ಪಾದಕರು ಹಾಗೂ ಗ್ರಾಹಕರು ಸೇರಿ ಗ್ರಾಹಕ ವೇದಿಕೆಯನ್ನು ಏರ್ಪಡಿಸಿ ಇನ್ನು ಮುಂದೆ ಏಕಮುಖವಾಗಿ ಬೆಲೆ ಹೆಚ್ಚಿಸುವುದನ್ನು ತಡೆಗಟ್ಟಬೇಕು.*

## ಭಾರತ ಹಾಕಿ ತಂಡಕ್ಕೆ ಕೊಡಗಿನ ಮೂವರು







ಇದೇ ಮಾರ್ಚ್ 2 ರಿಂದ ಮ್ಯಾಡ್ರಿಡ್‌ನಲ್ಲಿ ನಡೆಯುತ್ತ ಲಿರುವ ಒಲಂಪಿಕ್ ಹಾಕಿ ಅರ್ಹತಾ ಸುತ್ತಿನ ಪಂದ್ಯಾವಳಿಯಲ್ಲಿ ಪಾಲ್ಗೊಳ್ಳುವ ಭಾರತ ರಾಷ್ಟ್ರೀಯ ಹಾಕಿ ತಂಡಕ್ಕೆ ಕೊಡಗಿನ ಮೂವರು ಆಯ್ಕೆಯಾಗಿದ್ದಾರೆ. ಧನರಾಜ್ ಪಿಳ್ಳೆ ಅನುಪಸ್ಥಿತಿಯಲ್ಲಿ ದಿಲೀಪ್ ಟರ್ಕಿ ನಾಯಕತ್ವದ ತಂಡಕ್ಕೆ ಕೊಡಗಿನ ಹಾಕಿ ಪಟುಗಳಾದ ಅರ್ಜುನ್ ಹಾಲಪ್ಪ, ಲೆನ್ ಅಯ್ಯಪ್ಪ ಹಾಗೂ ಗೋಲ್‌ಕೀಪರ್ ತರಬೇತುದಾರರಾಗಿ ಎ. ಬಿ. ಸುಬ್ಬಯ್ಯ ಆಯ್ಕೆಯಾಗಿದ್ದಾರೆ. ಮಾ. 2 ರಿಂದ ನಡೆಯಲಿರುವ ಈ ಪಂದ್ಯಾವಳಿಯಲ್ಲಿ ಒಟ್ಟು 12 ರಾಷ್ಟ್ರಗಳ ತಂಡಗಳು ಪಾಲ್ಗೊಳ್ಳಲಿದ್ದು, ಮೊದಲ 7ಸ್ಥಾನಪಡೆಯುವ ತಂಡಗಳು ಅಥೆನ್ಸ್‌ನಲ್ಲಿ ಜರುಗುವ ಒಲಂಪಿಕ್ಸ್ ಸ್ಪರ್ಧೆಗೆ ನೇರ ಪ್ರವೇಶ ಪಡೆಯಲಿವೆ.

**ಜೀವನ ಒಂದು ತಂತಿ ಮೇಲಿನ ಕಸರತ್ತು - ಜಯಿಸಬೇಕು.**

# ಶುದ್ಧ ಮನಸ್ಸು

ಶುದ್ಧ ಮನಸ್ಸನ್ನು ಪಡೆಯುವುದು ಒಂದು ಜ್ಞಾನ ಸಿದ್ಧಿಯೇ ಆಗಿರುತ್ತದೆ. ಶುದ್ಧ ಮನಸ್ಸಿನ ಪರಿಚಯವು ಎಲ್ಲಾ ಬಹಿರಂಗ ಮತ್ತು ಆಂತರಿಕ ಕಲ್ಮಶಗಳನ್ನು ಹೋಗಲಾಡಿಸಲು ದೊರಕುವ ಯಂತ್ರವೆಂದು ಉಚ್ಚರಿಸಿದರೆ ಎಲ್ಲೂ ತಪ್ಪಾಗಲಾರದು. ಶುಭ್ರವಾದ ಮನಸ್ಸಿನ ಬಗ್ಗೆ ನಾವು ಉಪನಿಶತ್ತುಗಳಲ್ಲಿ ಸವಿಸ್ತಾರವಾಗಿ ತಿಳಿಯಬಹುದು.

ಶ್ರೀ ಸ್ವಾಮಿ ರಂಗನಾಥನಂದರು ಶುದ್ಧವಾದ ಮನಸ್ಸು ಹೀಗಿರಬೇಕು, ಹೇಗಿರಬೇಕು ಎಂದು ಮುಂದಿನ ಶಬ್ದಗಳಲ್ಲಿ ಸವಿಸ್ತಾರವಾಗಿ ತೆರೆದಿಟ್ಟಿದ್ದಾರೆ.

ಮನಸ್ಸೇ ಎಲ್ಲಾ ಆಂತರಿಕ, ಬಾಹ್ಯ ವಿಭಾಗಗಳಲ್ಲಿ ಬಹುಮುಖ್ಯ ಪಾತ್ರವನ್ನು ವಹಿಸುತ್ತದೆ. ಈಗಿನ ಈ ಯಾಂತ್ರಿಕ ಜೀವನದಲ್ಲಿ ಶುದ್ಧವಾದ ಮನಸ್ಸನ್ನು ಕಾಣುವುದು ಬಲು ಅಪರೂಪವಾಗಿದೆ. ಶುದ್ಧ ಮನಸ್ಸಿನ ವ್ಯಕ್ತಿಯ ಬೇಟಿಯು ತಮ್ಮ ಎಲ್ಲಾ ಮಾನಸಿಕ ಕಲ್ಮಶಗಳನ್ನು ನಾವು ಪರಿಶೀಲಿಸುವ ಕಾಯಕವನ್ನು ಮಾಡುತ್ತದೆ.

"ಶುದ್ಧ ಮನಸ್ಸಿಗೆ ಬ್ರಹ್ಮವನ್ನು ಅರಿಯುವ ಸಾಮರ್ಥ್ಯವುಂಟು. ಬ್ರಹ್ಮವು ಬುದ್ಧಿ ಗ್ರಾಹ್ಯಂ ಅತೀಂದ್ರಿಯಂ ಎಂದರೆ ಬುದ್ಧಿಯಿಂದ ಗೃಹಿಸಲ್ಪಡುವಂತದು ಆದರೆ ಇಂದ್ರಿಯಗಳಿಗೆ ಮೀರಿದ್ದು ಎಂದು ಹೇಳಿದೆ. ಅದು ಇಂದ್ರಿಯ ಬದ್ಧ ಮನಸ್ಸಿನ ಆಚೆಗಿರುವಂಥದು. ಶುದ್ಧ ಮನಸ್ಸು, ಶುದ್ಧ ಬುದ್ಧಿ, ಶುದ್ಧ ಆತ್ಮ ಈ ಮೂರು ಒಂದೇ ಎನ್ನುತ್ತಾರೆ. ಶ್ರೀ ರಾಮಕೃಷ್ಣರು, ತತ್ವಶಾಸ್ತ್ರವನ್ನು ಕೇವಲ ಬುದ್ಧಿಯ ವಿದ್ಯಾಭ್ಯಾಸದ ಹವ್ಯಾಸದಿಂದ ಆಧ್ಯಾತ್ಮಿಕ ಸಾಹಸವಾಗಿ ಪರಿವರ್ತಿಸುವುದು ಇದೇ ಆಗಿರುತ್ತದೆ. ಈ ಪ್ರಯತ್ನವೇ ಧರ್ಮವನ್ನು ಸಾಮೂಹಿಕ ರಾಜಕೀಯ ಶಿಕ್ಷಣದಿಂದ ಆಧ್ಯಾತ್ಮಿಕ ಅನುಭವವನ್ನು ಪಡೆಯುಲು ನಡೆಸುವ ಸಾಧನವಾಗಿ ಪರಿವರ್ತಿಸುತ್ತದೆ. ಧರ್ಮವನ್ನು ತತ್ವ ಚಿಂತನೆಗಳನ್ನು ಸತ್ಯಸಾಕ್ಷಾತ್ಕಾರಕ್ಕಾಗಿ ಅತ್ಯುನ್ನತ ಜೀವನ ಸಾಫಲ್ಯ ಸಾಧನೆಗಾಗಿ ನಡೆಸುವ ಉನ್ನತ ಆಧ್ಯಾತ್ಮಿಕ ಸಾಹಸವಾಗಿ ಅದು ಪರಿವರ್ತಿಸುತ್ತದೆ.

ಮನಸ್ಸನ್ನು ಶುದ್ಧ ಗೊಳಿಸುವುದು ಇಂದ್ರಿಯ ಸಂಸ್ಕಾರಗಳಿಂದ ಬದ್ಧವಾಗಿದೆ. ಪ್ರತಿಯೊಂದು ಭಾರತೀಯ ಆಧ್ಯಾತ್ಮಿಕ ಗ್ರಂಥದಲ್ಲಿ ಈ ವಿಷಯದ ಮೇಲೆ ಕೂಲಂಕುಶವಾದ ಚರ್ಚೆಗಳು ನಡೆದಿವೆ. ಹಲವಾರು ಅಭಿಪ್ರಾಯಗಳು ವ್ಯಕ್ತವಾಗಿವೆ. ಮನಸ್ಸು ಅಥವಾ ಅರಿವನ್ನು ಯಾವಾಗಲೂ ಇಂದ್ರಿಯಬದ್ಧ ಸಾಂತತೆಯಿಂದ ಬಿಡುಗಡೆಗೊಳಿಸಿ ಅದರ ನಿಜವಾದ ಅನಂತ ವಿಸ್ತಾರಕ್ಕೆ ಹಿಂದಿರುಗಿಸುವುದು ಹೇಗೆಂಬ ಪ್ರಶ್ನೆಗಳು ಉದ್ಭವಿಸುವುದು ಮಾನವರಲ್ಲಿ ಸಹಜ ಮನಸ್ಸು ಅದರ ಈಗಿನ ಸ್ವರೂಪದಲ್ಲಿ ಅನೇಕ ಇಂದ್ರಿಯ ಸಂಸ್ಕಾರಗಳಿಂದ ಬದ್ಧವಾಗಿದೆ. ಈ ಸಂಸ್ಕಾರಗಳು ಅದು ಶಾಂತವಾದ ರೀತಿಯಲ್ಲಿ ಕೆಲಸ ಮಾಡುವಂತೆ ಶಾಂತವಾದ ರೂಪಗಳಲ್ಲಿ ಮೈದೋರುವಂತೆ ಮಾಡುತ್ತದೆ. ಬಾರತದ ಪವಿತ್ರ ಗ್ರಂಥಗಳಲ್ಲಿ ಒಂದಾದ ಚಂಡಿ ಅಥವಾ ದೇವಿ ಮಹಾತ್ಮೆಯಲ್ಲಿ ಈ ಕೆಳಗಿನ ವಿಷಯಗಳನ್ನು ಅರಿಯಬಹುದು.

"ಜ್ಞಾನಮಸ್ತಿ ಸಮಸ್ತವು ಜಂತೋ ವಿಷಯ ಗೋಟರೆ"

ಸಮಸ್ತ ಜೀವಿಗಳ ಜ್ಞಾನವು ಇಂದ್ರಿಯಗಳಿಂದ ಕಾರ್ಯ ನಿರ್ವಹಿಸುತ್ತದೆ ಮತ್ತು ಅದಕ್ಕೆ ಬದ್ಧವಾಗಿದೆ. ಪ್ರಾಣಿಗಳು ಸೇರಿದಂತೆ ಪ್ರತಿಯೊಬ್ಬರಿಗೂ ಇಂದ್ರಿಯಗಳ ಮೂಲಕ ದೊರೆತ ಜ್ಞಾನವು ಇದ್ದೇ ಇರುತ್ತದೆ. ಈ ಜ್ಞಾನವು ಇಂದ್ರಿಯಾನುಭವದ ಸಣ್ಣ ತಿಣುಕುಗಳಿಂದ ತೊಟ್ಟಿಕ್ಕುತ್ತಿದೆಯೊ ಎಂಬಂತೆ ತೋರುತ್ತದೆ. ಪ್ರಾಣಿಗಳಲ್ಲಿ ಈ ಜ್ಞಾನವು ಹರಕುಮುರುಕಾಗಿದ್ದು ಅವ್ಯವಸ್ಥಿತವಾಗಿರುತ್ತದೆ. ಸಾಮಾನ್ಯ ಮಾನವರಲ್ಲಿ ತಕ್ಕ ಮಟ್ಟಿಗೆ ವ್ಯವಸ್ಥಿತವೂ ಸುಸಂಬದ್ಧವೂ ಆಗಿರುತ್ತದೆ. ವಿಜ್ಞಾನಿಗಳಲ್ಲಿ ಅದು ಅತ್ಯಂತ ವ್ಯವಸ್ಥಿತವೂ ಮತ್ತು ಸುಸಂಬದ್ಧವಾಗಿರುವುದು ಗೋಚರಿಸುತ್ತದೆ. (ವಿಜ್ಞಾನಿಗಳೆಂದರೆ ಬರೀ ವಿಜ್ಞಾನದ ಬಗ್ಗೆ ನವೀನ ಜ್ಞಾನವನ್ನು ಹೊರತೆಗೆಯುವವರನ್ನು ಮಾತ್ರ ವಿಜ್ಞಾನಿಗಳೆನ್ನಲು ಸಾಧ್ಯವಿಲ್ಲ. ಜಗತ್ತಿನ ಸಮಸ್ತ ವಿಷಯಗಳಿಗೆ ಸಂಬಂಧಪಟ್ಟ ನವೀನ ಜ್ಞಾನವನ್ನು ಇತರರಿಗೆ ಅರುಹುವವರನ್ನು ವಿಜ್ಞಾನಿಗಳೆಂದು ಪರಿಗಣಿಸಲ್ಪಡುತ್ತಾರೆ.) ಜ್ಞಾನವು ಪಡೆಯಬಹುದಾದ ಅತ್ಯುನ್ನತ ರೂಪ ಅದು ಎಂದು ಭಾವಿಸಿದರೆ ಅದು ಬಹು ದೊಡ್ಡ ತಪ್ಪಾಗುತ್ತದೆ. ಎಲ್ಲಾ ಊಹಾತ್ಮಕ ತತ್ವ ಚಿಂತನೆಯೂ ಇದೇ ತಪ್ಪನ್ನು ಮಾಡುತ್ತದೆ. ಇಂದ್ರಿಯಗಳು ನೀಡುವ ಅಂಶಗಳಿಗೆ ಎಚ್ಚರದ ಸ್ಥಿತಿಯ ಅಂಶಗಳಿಗೆ ಮಾತ್ರ ತನ್ನನ್ನು ತಾನು ಸೀಮಿತಗೊಳಿಸಿಕೊಂಡು, ಸಮಸ್ತ ಅನುಭವವನ್ನು ತನ್ನ ಅಧ್ಯಯನದ ಕ್ಷೇತ್ರಕ್ಕೆ ತೆಗೆದುಕೊಳ್ಳದೆ ಅದು ತತ್ವಶಾಸ್ತ್ರವಾಗಿ ಅಸಂಗತವಾಗುತ್ತದೆ.

ಬಹುಶಃ ವಿಶ್ವದ ಎಲ್ಲಾ ತತ್ವ ಚಿಂತನೆಗಳಿಗೆ ಭಾರತೀಯ ತತ್ವ ಚಿಂತನೆಯನ್ನು ಹೋಲಿಸಿದರೆ, ಭಾರತೀಯ ತತ್ವ ಚಿಂತನೆಯು ಬಹಳಷ್ಟು ಶ್ರೇಷ್ಠ ಮಟ್ಟದಲ್ಲಿರುವುದು ಕಂಡುಬರುತ್ತದೆ. ಈ ವಿಷಯದ ಮೇಲೆ ಅಧ್ಯಯನ ಮಾಡಲು ಹೊರಟರೆ ಉಪನಿಷತ್ತುಗಳು ಭಾರತೀಯ ತತ್ವಚಿಂತನೆಯನ್ನು ಇತರರಿಗಿಂತ ಭಿನ್ನವಾಗಿ ಮತ್ತು ಸರಿಯಾದ ಮಾರ್ಗದಲ್ಲಿ ನಡೆಸಿಕೊಂಡು ಬಂದಿರುವುದು ಉಲ್ಲೇಖನೀಯ. ದತ್ತಾಂಶವಾಗಿ ಎಲ್ಲಾ ಅನುಭವವನ್ನು ವಾಸ್ತವಂಶಗಳ ಜಗತ್ತು ಮತ್ತು ಮೌಲ್ಯಗಳ ಜಗತ್ತು, ನಿದ್ದೆ, ಎಚ್ಚರ, ಸುಶುಪ್ತಿಗಳಲ್ಲಿ ತೋರುವ ಜಗತ್ತು ಇವನ್ನೆಲ್ಲ ವಿಮರ್ಶಾತ್ಮಕವಾಗಿ ಪರಿಶೀಲಿಸಿ ಉಪನಿಷತ್ತುಗಳು ತತ್ವಶಾಸ್ತ್ರವನ್ನು ಆಳವೂ ವಿಶಾಲವೂ ಆದದ್ದಾಗಿ ಮಾಡಿದವು. ಶಿಕ್ಷಣಕ್ಕೆ ಒಳಪಡಿಸಿದಾಗ ಮಾನವನ ಮನಸ್ಸು ತನ್ನ ಉನ್ನತ ಆಯಾಮಗಳನ್ನು ತೆರೆದು ತೋರಿಸುತ್ತದೆ. ಉನ್ನತ ಶಿಕ್ಷಣವು ಮಾನವನ ಜೀವನದಲ್ಲಿ ಹೊಸ ಭೇದಕ ಶಕ್ತಿಯನ್ನು ಹೊಮ್ಮಿಸುವುದರಲ್ಲಿ ಗಣನೀಯ ಪಾತ್ರವನ್ನು ವಹಿಸುತ್ತದೆ.

ಒಂದು ಮಟ್ಟದಲ್ಲಿ ಇವುಗಳನ್ನು ಅಂತೀಂದ್ರಿಯ ಅರಿವುಗಳು ಎಂದು ಕರೆಯುತ್ತಾರೆ. ಅಲ್ಲಿ ಮಾನವನ ಜ್ಞಾನವು ಇಂದ್ರೀಯಗಳ ಉಪಕರಣದ ಇತಿಮಿತಿಗಳಿಂದ ಬಿಡುಗಡೆ ಹೊಂದುತ್ತದೆ. ಆದರೆ ಇದೂ ಕೂಡ ಘಟನಾವಳಿಯ ಜಗತ್ತಿಗೆ, ತೋರಿಕೆಗಳ ಜಗತ್ತಿಗೆ ಸೀಮಿತವಾದದ್ದು. ಎಲ್ಲಾ ಘಟನೆಗಳ ಹಿಂದಿರುವ ಮೂಲಭೂತ ವಸ್ತುವನ್ನು ನಾಶಹೊಂದುವ ರೂಪಗಳ ಜಗತ್ತಿನ ಹಿಂದೆ ಇರುವ ಅವಿನಾಶಿಯಾದ ಸತ್ಯವನ್ನು ತೋರಿಸುವ ಭೇದಕ ಶಕ್ತಿಯನ್ನು ವ್ಯಕ್ತಪಡಿಸಿದಾಗಲೇ ಅದು ಅತ್ಯುತ್ತಮ ರೂಪದಲ್ಲಿದೆ ಎಂದು ಹೇಳಬಹುದು. ಉಪನಿಷತ್ತುಗಳ ಪ್ರಕಾರ ತತ್ವಚಿಂತನೆ ಎಂಬುವುದರ ನಿಜವಾದ ಅರ್ಥದಲ್ಲಿ ಪರಾವಿದ್ಯಾ ಎಂಬುದು ಇದುವೇ ಆಗಿರುತ್ತದೆ.

-ಹಿತೇಶ್ ಬಿಳಿಮಲೆ, ಮಂಗಳೂರು

---

**ಶುದ್ಧ ಹೃದಯ ಪರಿಶುದ್ಧ ಮನಸ್ಸು ಮಾತ್ರ ಸರ್ವಶ್ರೇಷ್ಠ ಕಾಯಕವನ್ನು ಮಾಡಿಸುತ್ತದೆ.**

# ಅರೆಭಾಷೆ ಗೌಡರ ಇಣುಕು ನೋಟ

ಕೊಡಗಿನ ಇತಿಹಾಸದಲ್ಲಿ ಅರೆಭಾಷೆ ಮಾತನಾಡುವ ಗೌಡ ಜನಾಂಗದವರನ್ನು ದಕ್ಷಿಣ ಕನ್ನಡ ಜಿಲ್ಲೆಯಿಂದ ಕ್ರಿ. ಶ. 1799 ರಲ್ಲಿ ಕೊಡಗಿನ ರಾಜ ದೊಡ್ಡ ವೀರರಾಜನು ಕರೆಯಿಸಿದನೆಂದು ಉಲ್ಲೇಖವಿದೆ. ಇದು ಅಧಿಕೃತವಾಗಿ 'ಕೊಡಗು ಜಿಲ್ಲೆ' ಕರ್ನಾಟಕ ರಾಜ್ಯ ಗಸೇಟಿಯರ್‌ನ ಪುಟ 175 ರಲ್ಲಿ ಅಂಕಿತವಾಗಿದೆ. ಗೌಡರುಗಳು ಬೇರೆ ಕಡೆಯಿಂದ ತಾವಾಗಿಯೆ ಖಂಡಿತ ವಲಸೆ ಬಂದವರಲ್ಲ. ಗೌಡರುಗಳು ದಕ್ಷಿಣ ಕನ್ನಡ ಜಿಲ್ಲೆಯಿಂದ ಕೊಡಗಿಗೆ ಬರಲು ಅದರಲ್ಲೂ ಮಡಿಕೇರಿಯಿಂದ ಭಾಗಮಂಡಲದವರೆಗೆ ಅಧಿಕವಾಗಿ ಬಂದು ಸೇರಲು ಒಂದು ಮುಖ್ಯ ಕಾರಣವೇನೆಂದರೆ ಕ್ರಿ. ಶ. 1785 ರ ನಂತರ ಕೊಡಗಿನವರು ಟಿಪ್ಪು ಸುಲ್ತಾನನ ವಿರುದ್ಧ ಬಂಡಾಯ ಎದ್ದಿದ್ದರಿಂದ ಸಿಟ್ಟಿಗೆದ್ದ ಟಿಪ್ಪು ಸುಲ್ತಾನನು ಸ್ವತಃ ಸೈನ್ಯದೊಡನೆ ಬಂದು "ದೇವಟು ಪರಂಬು" ಎಂಬಲ್ಲಿ ಠಾಣ್ಯ ಹೂಡಿ ಸಾವಿರಾರು ಕೊಡಗಿನವರನ್ನು ಮತ್ತು ಅವರ ಸಂಸಾರವನ್ನುಬಂಧಿಸಿ ಶ್ರೀರಂಗಪಟ್ಟಣಕ್ಕೆ ಸಾಗಿಸಿದನು. ಆಗ ಬಂಧಿತರಾದವರ ಸಂಖ್ಯೆ 80,000 ಸಾವಿರ ಎಂದು ಇತಿಹಾಸದಿಂದ ತಿಳಿದು ಬರುತ್ತದೆ. ಹೀಗೆ ಬಂಧಿತರಾದ ಕೊಡಗಿನವರನ್ನು "ರಾಜೇಂದ್ರನಾಮೆ"ಯಲ್ಲಿ ಉಲ್ಲೇಖಿಸಿದಂತೆ "ಮುಂಜಿ ಮಾಡಿ" ಇಸ್ಲಾಂ ಧರ್ಮಕ್ಕೆ ಮತಾಂತರ ಮಾಡಿದನು. ಇದರಿಂದಾಗಿ ಮಡಿಕೇರಿಯಿಂದ ಭಾಗಮಂಡಲದವರೆಗೆ ಜನ ರಹಿತವಾಯಿತು. ದೊಡ್ಡ ವೀರರಾಜನು 1788 ರ ಡಿಸೆಂಬರ್ ತಿಂಗಳಲ್ಲಿ ಪಿರಿಯಾ ಪಟ್ಟಣದ ಕಾರಾಗೃಹದಿಂದ ತಪ್ಪಿಸಿಕೊಂಡು ನಾಲ್ಕು ನಾಡು ಅರಮನೆಯನ್ನು ಸೇರಿಕೊಂಡನು. ಮುಂದೆ 1791 ರ ಆರಂಭದಲ್ಲಿ ಟಿಪ್ಪು ಸುಲ್ತಾನನ ವಶದಲ್ಲಿದ್ದ ಸುಳ್ಯ ಮತ್ತು ಪುತ್ತೂರು ಸೀಮೆಗಳನ್ನು ಗೆದ್ದುಕೊಂಡನು. ಕೊಡಗಿನ ವ್ಯಾಪ್ತಿ ಪಿರಿಯಾಪಟ್ಟಣದಿಂದ ಪಾಣೆ ಮಂಗಳೂರು ತನಕವಿದ್ದ ವಿಶಾಲ ಕೊಡಗು ಅಂದು ಆಗಿತ್ತು.

ಕೊಡಗಿನ ರಾಜ ತನ್ನದೆ ವಿಶಾಲ ವ್ಯಾಪ್ತಿಯ, ಕೃಷಿಯಲ್ಲಿ ನುರಿತ ಗೌಡ ಜನಾಂಗವನ್ನು ಈಗಿನ ದಕ್ಷಿಣ ಕನ್ನಡ ಜಿಲ್ಲೆಯಿಂದ ಕರೆಯಿಸಿ ಭೂಮಿ, ಜಮ್ಮ ಇತ್ಯಾದಿ ನೀಡಿ ಪ್ರೋತ್ಸಾಹಿಸಿದನು. ವಿಶಾಲ ಕೊಡಗು ಸುಳ್ಯ ಪ್ರದೇಶದಿಂದ ಅರೆಭಾಷೆ ಮಾತನಾಡುವ ಕೃಷಿನುರಿತ ಗೌಡ ಜನಾಂಗದವರನ್ನು ಕೊಡಗಿಗೆ ಕರೆಯಿಸಿ ಕೊಂಡು, ಅವರಿಗೆ ಖಾಲಿ ಇದ್ದ ಜಮೀನನ್ನು ಜಮ್ಮವಾಗಿಯು, ಉಂಬಳಿಯಾಗಿಯೂ ಕೊಟ್ಟು ಈ ರೀತಿ ಜಮೀನುಗಳನ್ನು ಕೊಟ್ಟದಕ್ಕೆ ಪತ್ರ ಆಧಾರಗಳು ಸಹ ಇದೆ. ಇದಕ್ಕೆ ರಾಜನ ಹುಕುಂನಾಮೆ "ನಿರೂಪ" ಎಂದು ಹೇಳುತ್ತಾರೆ. ಕೆಲವು ಗೌಡರುಗಳು ಇದೆ ಜಮೀನಿನಲ್ಲಿ ಮೊದಲು ವಾಸವಿದ್ದ ನಿವಾಸಿಗಳ ಮನೆತನದ ಹೆಸರುಗಳನ್ನೇ ಇಟ್ಟುಕೊಂಡಿರುವರು. ಅದುದರಿಂದ ಕೆಲವು ಗೌಡ ಮನೆತನದ ಹೆಸರು ಮುಕ್ಕಾಟೀರ ಕೈಬಿಲಿರ, ಅಯ್ಯಂಡ್ರ, ಪೊಕ್ಕಳಂಡ್ರ ಕಾಳೆಯಂಡ್ರ, ನಾಟೋಳನ ಮುಂತಾದ ಮನೆತನದ ಹೆಸರು ಬಂದಿದೆ. ಇನ್ನು ಕೆಲವರು ತಮ್ಮ ಮೂಲ ಮನೆತನದ ಸುಳ್ಯ ಕಡೆಯ ಹೆಸರುಗಳನ್ನೇ ಇಟ್ಟುಕೊಂಡಿರುವರು. ಕನ್ನಡ ಜಿಲ್ಲೆಯ ಗೌಡರ ಐನ್‌ಮನೆಗಳು ಇಂದಿಗೂ ಕೂಡ ಇದೆ. ಸುಳ್ಯ ತಾಲ್ಲೂಕು ಉತ್ತರ ಕೊಡಗಿಗೆ ಅತೀ ಸಮೀಪದಲ್ಲಿರುವುದರಿಂದ ಮಡಿಕೇರಿಯಿಂದ ಭಾಗಮಂಡಲದವರೆಗೆ ಅಧಿಕ ಸಂಖ್ಯೆಯಲ್ಲಿ ಗೌಡ ಜನಾಂಗ ದವರು ಬಂದು ಸೇರಿದ್ದಾರೆ. ಇನ್ನೊಂದು ವೈಶಿಷ್ಟ್ಯವೇನೆಂದರೆ ಭಾಗ ಮಂಡಲದ ಕೊರಂಗಾಲ, ಚೆರಂಗಾಲ, ತಾವೂರು, ತಣ್ಣಿ ಮಾನಿ, ಅವಂದೂರು ಗ್ರಾಮಗಳಲ್ಲಿ ಕೊಡಗರ ಮನೆತನವೇ ಇರುವುದಿಲ್ಲ. ಎಲ್ಲರೂ ಗೌಡರೆ.

ಕೊಡಗಿನಲ್ಲಿ ಕೊಡಗರೆ ಅಧಿಕ ಸಂಖ್ಯೆಯಲ್ಲಿದ್ದರಿಂದಲೂ ಮತ್ತು ಕೊಡಗು ರಾಜರ ಕಾಲದಲ್ಲಿ ನಂತರ ಬ್ರಿಟಿಷರ ಅಧಿಪತ್ಯದಲ್ಲಿ ಆಡಳಿತ ಜವಾಬ್ದಾರಿ ಕೇವಲ ಕೊಡಗರಿಗೆ ಮಾತ್ರ ಮೀಸಲಾಗಿದ್ದರಿಂದ ಗೌಡ ಜನಾಂಗದವರು ಮುಂದಕ್ಕೆ ಬರಲು ಅಸಾಧ್ಯವಾಯಿತು. 1875 ರ ಒಂದು ಸಮೀಕ್ಷೆಯ ಪ್ರಕಾರ ಕೊಡಗಿನಲ್ಲಿ ಒಟ್ಟು 1545 ಶಾಲಾ ವಿದ್ಯಾರ್ಥಿಗಳು ಇದ್ದರಂತೆ. ಅದರಲ್ಲಿ 1082 ವಿದ್ಯಾರ್ಥಿಗಳು ಕೊಡಗರಾಗಿದ್ದರು ಎಂದ ಮೇಲೆ ಗೌಡ ಜನಾಂಗದ ಶಿಕ್ಷಣ ಪ್ರಗತಿ ಎಷ್ಟರ ಮಟ್ಟಿಗೆ ಇದ್ದಿರಬಹುದೆಂದು ತಿಳಿದುಕೊಳ್ಳಬಹುದು.

ಒಂದು ಜಾತಿ ಅಥವಾ ಸಮಾಜ ಬೆಳೆಯಬೇಕಾದರೆ ಶಿಕ್ಷಣ ಬಹು ಮುಖ್ಯ ಪಾತ್ರ ವಹಿಸುತ್ತದೆ. ಅದೂ ಅಲ್ಲದೆ 1837 ರಲ್ಲಿ ಬ್ರಿಟಿಷರ ವಿರುದ್ಧ ದಂಗೆ ಎಬ್ಬಿಸಿದ ಗುಡ್ಡೆ ಮನೆ ಅಪ್ಪಯ್ಯ ಗೌಡ, ಕುಕ್ಕನೂರು ಚೆನ್ನಯ್ಯಗೌಡ ಮತ್ತು ಕೆದಂಬಾಡಿ ರಾಮಗೌಡರ ಪತನವಾದ ಮೇಲೆ ಗೌಡ ಜನಾಂಗದ ಬೆನ್ನೆಲುಬೆ ಮುರಿದು ಬಿದ್ದಿತ್ತು. ಬ್ರಿಟಿಷರ ಒಡೆದು ಆಳುವ ನೀತಿಯನ್ನು ವಿರೋಧಿಸಿ ಗೌಡ ಜನಾಂಗದವರನ್ನು ಮುಂದೆ ತರಬೇಕೆಂದು ಯಾರು ಶ್ರಮಿಸಿದರೊ ಅವರೆ ಇನ್ನಿಲ್ಲ ಎಂದ ಮೇಲೆ ಅಂತಹ ಪರಿಸ್ಥಿತಿಯಲ್ಲಿ ನಮ್ಮ ಜನಾಂಗಕ್ಕೆ ಚೇತರಿಸಿಕೊಳ್ಳಲು ಆಗದೇ ಇರುವಂತಹ ಪರಿಸ್ಥಿತಿ. ನಮ್ಮ ಜನಾಂಗದ ಇಂದಿನ ಶೋಚನೀಯ ಸ್ಥಿತಿಗೆ ನಮ್ಮ ಪೂರ್ವಜರನ್ನು ನಾವು ಯಾರು ದೂಷಿಸುವುದು ಸರಿಯಲ್ಲ.

ಸ್ವಾತಂತ್ರ್ಯ ಚಳುವಳಿಯ ದಿನಗಳಲ್ಲಿ ಅದೆಷ್ಟು ಗೌಡ ಜನಾಂಗದವರು ಹೋರಾಡಿದರು. ಅವರಲ್ಲಿ ದಿ. ಪೂಜಾರಿರ ರಾಮಪ್ಪನವರು ಒಬ್ಬರು. ಬ್ರಿಟಿಷರ ಗುಂಡಿನೇಟಿಗೆ ಹೆದರದೆ

---

**ಹತ್ತು ಕುಟುಂಬ ಹದಿನೆಂಟು ಗೋತ್ರದ ಗೌಡರೆಂದು ಬ್ರಿಟಿಷರ ಗುಲಾಮರಲ್ಲ ಅವರು ನಿಜವಾದ ದೇಶಭಕ್ತರು.**

ಮಡಿಕೇರಿಯಲ್ಲಿ ಭದ್ರವಾದ ಕೋಟೆಯೊಳಗೆ ಪಹರೆದಾರರ ಕಣ್ಣು ತಪ್ಪಿಸಿ ತ್ರಿವರ್ಣ ಭಾವುಟವನ್ನು ಹಾರಿಸಿ 30 ಅಡಿ ಎತ್ತರದ ಕಲ್ಲಿನ ಗೋಡೆಯಿಂದ ಜಿಗಿದು ತಪ್ಪಿಸಿಕೊಂಡ ಏಕೈಕ ವೀರ, ತನ್ನ ಸರಳ ಜೀವನಕ್ಕೆ ಹೆಸರುವಾಸಿಯಾಗಿದ್ದ ಅವರು, ಸ್ವಾತಂತ್ರ್ಯದ ನಂತರ ಸರಕಾರಿ ಸವಲತ್ತುಗಳು ನಿಯಂತ್ರಣ ಬಂದಾಗ ತಿರಸ್ಕರಿಸಿದ ಮಹಾನುಭಾವರು. ಜೀವನ ಪರ್ಯಂತ ಬ್ರಹ್ಮಚಾರಿ ಆಗಿದ್ದು ಯಾವುದೇ ವ್ಯಾಮೋಹಕ್ಕೆ ಒಳಗಾಗದೆ ತನ್ನ ಕೊನೆಯ ದಿನಗಳನ್ನು ಕಡುಬಡತನದಲ್ಲಿ ಕಳೆದ ಈ ಮಹಾತ್ಮರನ್ನು ನಮ್ಮ ಗೌಡ ಜನಾಂಗವು ಗುರುತಿಸಲೆ ಇಲ್ಲ. ಅವರು ಪಕ್ಕ ಗಾಂಧಿವಾದಿಗಳಾಗಿದ್ದರು. ಆದ್ದರಿಂದಲೆ ನಾವು ಅವರನ್ನು ಪ್ರೀತಿಯಿಂದ ಗಾಂಧಿ "ಚಾಂಪ" ಎಂದೆ ಕರೆಯುತ್ತಿದ್ದವು. ಹಿಮಾಲಯಶಿಖರ ಏರಿದವರನ್ನು ಮಾತ್ರ ಅಭಿನಂದಿಸಿದರೆ ಸಾಲದು. ಶಿಖರ ಏರುವಾಗ ಮಧ್ಯದಲ್ಲಿ ಬಿದ್ದವರ ಸಾಧನೆ, ಶಿಖರ ಏರಿದವರ ಸಾಧನೆಗಿಂತ ಕಡಿಮೆ ಏನು ಇರುವುದಿಲ್ಲ. ಅವರು ಸಹ ಪರಾಕ್ರಮಿಗಳೇ. ಆದುದರಿಂದ ಇನ್ನಾದರು ನಮ್ಮ ಸರಘು ಸಂಸ್ಥೆಗಳು ಅಂಥಹ ಅನಾಮಧೇಯ ಗೌಡ ಜನಾಂಗದ ಸ್ವಾತಂತ್ರ್ಯ ಸೇನಾನಿಗಳನ್ನು ಪತ್ತೆ ಹಚ್ಚಿ ಲೇಖನದ ಮೂಲಕ ಬೆಳಕಿಗೆ ತರುವಂತಾಗಬೇಕು. ಗುಡ್ಡೆಮನೆ ಅಪ್ಪಯ್ಯಗೌಡ, ಪೂಜಾರಿ ಮನೆ ರಾಮಪ್ಪನವರ ಪುತ್ಥಳಿಗಳು ಕೊಡಗಿನಲ್ಲಿ ರಾರಾಜಿಸಬೇಕು. ಆಗಲೇ ಅವರ ಆತ್ಮಕ್ಕೆ ಶಾಂತಿ ದೊರಕುವುದು ಮತ್ತು ಮುಂದಿನ ಪೀಳಿಗೆಯ ಭವಿಷ್ಯಕ್ಕೆ ಆಶೀರ್ವಾದ.

1947 ರಲ್ಲಿ ಸ್ವಾತಂತ್ರ್ಯ ಬಂದ ನಂತರ ಇಲ್ಲೀ ತನಕ ಗೌಡ ಜನಾಂಗದವರು ಹೇಳಿಕೊಳ್ಳುವಂತದ್ದೇನೂ ಸಾಧಿಸಿಲ್ಲ. ಗೌಡ ಸಮಾಜ, ಸಂಘಗಳು ಅಸ್ಥಿತ್ವದಲ್ಲಿದ್ದರೂ ಈ 57 ವರುಷಗಳಲ್ಲಿ ಒಂದೆ ಒಂದು ಐ. ಎ. ಎಸ್. ಆಫೀಸರ್ ಅಥವಾ ಐ. ಪಿ. ಎಸ್. ಆಫೀಸರ್ ಆಗಿರುವುದಿಲ್ಲ. ಇದರಿಂದ ನಾವು ಎಷ್ಟರ ಮಟ್ಟಿಗೆ ಮುಂದುವರಿದಿದ್ದೇವೆಂದೂ ತಿಳಿಯುತ್ತದೆ. ಹೀಗಿದ್ದ ಮಾತ್ರಕ್ಕೆ ನಮ್ಮಲ್ಲಿ ಪ್ರತಿಭಾವಂತ ಮಕ್ಕಳಿಗೆ ಕೊರತೆ ಇದೆ ಎಂದಲ್ಲ. ಮುಖ್ಯವಾಗಿ ಅಂತಹ ಪ್ರತಿಭಾವಂತ ಮಕ್ಕಳು ಮುಂದೆ ಬರಲು ಅವರಿಗೆ "ರೆಸಿಡೆನ್ಸಿ" ಮಾದರಿಯ ವಿದ್ಯಾ ಸಂಸ್ಥೆ ಮತ್ತು ಆರ್ಥಿಕ ನೆರವು ಬೇಕು. ಕೊಡಗಿನಲ್ಲಿ ಈಗ ಗೌಡರುಗಳು ಬಡವರೇನೂ ಅಲ್ಲ. ಈಗ ಟಾಟಾ ಸುಮೊ, ಜಿಪೆಲ್ ಕಾರುಗಳಲ್ಲಿ ತಿರುಗುವವರು ಇದ್ದಾರೆ. ಇದನ್ನು ಮೈಸೂರಿನ ಮಾಜಿ ಮೇಯರ್ ವಾಸುರವರು ಸಹ ಮೈಸೂರಿನ ವಿದ್ಯಾಸಂಘದ ಒಕ್ಕೂಟದಲ್ಲಿ ಸಂಘದ ದಯನೀಯ ಸ್ಥಿತಿಯನ್ನು ನೋಡಿ ಉಲ್ಲೇಖಿಸಿದ್ದಾರೆ. ಇನ್ನಾದರೂ ಅಂತಹ ಶ್ರೀಮಂತರು ಮುಂದೆ ಬಂದು ನಮ್ಮ ಸಮಾಜಕ್ಕೆ ದಾರಿದೀಪವಾಗಬೇಕು. ನಮ್ಮ ಗೌಡ ಸಂಘ ಮತ್ತು ಸಮಾಜಗಳ ಪ್ರಗತಿಯಂತೂ ಕೂರ್ಮನಡಿಗೆಯಲ್ಲಿಯೆ ಇದೆ. ಬೆಂಗಳೂರಿನಲ್ಲಿ 2,3 ಸಮಾಜಗಳು ಇವೆ. ಇಲ್ಲಿ ವಿಮರ್ಶಿಸಬೇಕಾದ ವಿಷಯ ಏನೆಂದರೆ ಒಂದು ಸಮಾಜ ಅಸ್ತಿತ್ವದಲ್ಲಿದ್ದ ಮೇಲೆ ದಕ್ಷಿಣ ಕನ್ನಡ ಮತ್ತು ಕೊಡಗು ಗೌಡ ಸಮಾಜ, ಕೊಡಗು ಗೌಡ ಸಮಾಜ, ಈಗ ಇನ್ನೊಂದು ಸಂಘ ಏಕೆ ಬೇಕು? ಅಂತಹ ಸಂಘ ಸಂಸ್ಥೆಗಳಿಂದ ಜನಾಂಗದವರನ್ನು ಒಂದುಗೂಡಿಸುವುದು ಕಷ್ಟಕರ ಮತ್ತು ಆರ್ಥಿಕವಾಗಿ ವಿಂಗಡಿಸಲ್ಪಡುವುದು.

ನಮ್ಮ ಗೌಡ ಬಾಂಧವರು ಕಳೆದ ೨೦೦ ವರುಷಗಳಲ್ಲಿ ಸಾಧಿಸದನ್ನು ಅಮ್ಮಾಜಿರ ಪೊನ್ನಪ್ಪನವರು ಮತ್ತು ಕೊಡಗಿನ ಗೌಡ ಸಾಂಸ್ಕೃತಿಕ ಅಕಾಡೆಮಿ, ಕೊಡಗು ಸಂಗಾತಿ ಪತ್ರಿಕೆಯವರು ಗೌಡ ಮಹಿಳಾ ಒಕ್ಕೂಟದ ಸತತ ಪ್ರಯತ್ನದಿಂದ ಸಾಂಸ್ಕೃತಿಕ ಕ್ರೀಡೆ, ಪತ್ರಿಕಾ ಕ್ಷೇತ್ರದಲ್ಲಿ ತುಂಬಾ ಪ್ರಗತಿ ಸಾಧಿಸಿದ್ದಾರೆ. ಅಮ್ಮಾಜಿರ ಪೊನ್ನಪ್ಪನವರು ನಾಲ್ಕು ವರ್ಷದ ಹಿಂದಿನ ದಸರಾ ಸಾಂಸ್ಕೃತಿಕ ಕಾರ್ಯಕ್ರಮದ ಅಂಗವಾಗಿ ಮಡಿಕೇರಿಯಲ್ಲಿ ಏರ್ಪಡಿಸಿದ ಮೇಳದಲ್ಲಿ ತಮಗೆ ಸಿಕ್ಕಿದ ಕೇವಲ 8 ನಿಮಿಷಗಳ ಸಮಯದಲ್ಲಿ ಉನ್ನತ ಮಟ್ಟದ ಕಾರ್ಯಕ್ರಮವನ್ನು ಪ್ರದರ್ಶಿಸಿ ಜನರನ್ನು ಅರ್ಧ ತಾಸಿನವರೆಗೂ ಮುಗ್ಧರನ್ನಾಗಿ ಮಾಡಿದ ಕೀರ್ತಿ ಅವರಿಗೆ ಸಲ್ಲುತ್ತದೆ. ಅಲ್ಲದೆ ಇತ್ತೀಚೆಗೆ ಬೆಂಗಳೂರಿನಲ್ಲಿ ನೀಡಿದ ಕಾರ್ಯಕ್ರಮವು ಶ್ಲಾಘನೀಯವಾಗಿರುತ್ತದೆ. ಅವರ ಸ್ವಪ್ರಯತ್ನದಿಂದ ಬಿಡುಗಡೆಯಾದ ಹಾಡಿನ ಸುರುಳಿಯು ಗೌಡ ಜನಾಂಗದ ಮನೆ ಮನೆಯಲ್ಲಿ ಮತ್ತು ಸಾರ್ವಜನಿಕ ಕ್ಷೇತ್ರದಲ್ಲಿ ರಂಜಿಸುತ್ತಿದೆ. ನಿಜವಾಗಿ ಹೇಳಬೇಕೆಂದರೆ ಗೌಡ ಎಂದರೆ ಯಾರು ಎಂದು ಈಗ ಜನರಿಗೆ ಅರಿಯು ತಿಳಿಯು ಮೂಡಿಸಿದ ಈ ಮೇಲಿನ ಸಂಸ್ಥೆಗಳ ಪ್ರಯತ್ನಗಳಿಗೆ ಅಸೂಯೆ ಪಡದೆ ಅವರಿಗೆ ಪ್ರೋತ್ಸಾಹ ನೀಡಬೇಕು. ವೈಯಕ್ತಿಕವಾಗಿ ಚಿಂತಿಸದೆ ವಿಶಾಲ ಹೃದಯದ ಸಮಾಜದ ನೆಲೆಯಲ್ಲಿ ಎಲ್ಲರು ಚಿಂತಿಸಬೇಕು.

ನಮ್ಮ ಜನಾಂಗದ ಜನವಾಣಿಯಾಗಿರುವ 'ಕೊಡಗು ಸಂಗಾತಿ' ಪತ್ರಿಕೆ ಪ್ರಗತಿ ಪಥದಲ್ಲಿದೆ. ಅದನ್ನು ಮುಂದೆ ತರುವುದು ನಮ್ಮೆಲ್ಲರ ಕರ್ತವ್ಯ. ನಾನು ಬೆಂಗಳೂರಿನಲ್ಲಿ ಕೆಲವು ಗೌಡ ಬಾಂಧವರಲ್ಲಿ ಚಂದದಾರರಾಗಲು ವಿನಂತಿಸಿಕೊಂಡೆ. ಅದರಂತೆ ಕೆಲವರು ಚಂದಾದಾರರಾಗಿದ್ದಾರೆ. ಇನ್ನು ಕೆಲವರು ಕೀಳು ಭಾವನೆಯಲ್ಲಿ "ಅದೆಂತಹ ಪತ್ರಿಕೆ, ಅದರಲ್ಲಿ ಎಂತಾ ಉಟ್ಟು ಎಂದರು. ಅವರಿಗೆ ನಾನು ಪತ್ರಿಕೆಯ ಉದ್ದೇಶ ಮತ್ತು ಅದರಿಂದ ನಮ್ಮ ಜನಾಂಗಕ್ಕೆ ಆಗುವ ಲಾಭಗಳನ್ನು ತಿಳಿಸಿದೆ. ಇಷ್ಟಾದರು ಅಂಥವರ ಮೇಲೆ "ಗೊರ್ಗಲ್ಲ ಮೇಲೆ ಮಳೆ ಬಿದ್ದಂತೆ" ಯಾವ ಪರಿಣಾಮವು ಬೀರಿಲ್ಲ. ಈಗ ನಮ್ಮ ಗೌಡ ಜನಾಂಗದಲ್ಲಿ ವರುಷಕ್ಕೆ 150 ರೂಪಾಯಿ ಚಂದಾ ಹಣ ಕೊಡಲು ಅಸಾಧ್ಯವಾಗುವಷ್ಟು ದರಿದ್ರತನ ಇರಲಿಕ್ಕಿಲ್ಲವೆಂದು ನನ್ನ ಭಾವನೆ. ಇನ್ನಾದರೂ ಚಂದದಾರರಾಗದೆ ಇರುವವರು, ಮನೆಗೆ ಒಬ್ಬರಂತೆ ಚಂದದಾರರಾಗಿ ನಮ್ಮ ಪ್ರಗತಿಗೆ ದಾರಿ ದೀಪವಾಗಿರುವ "ಕೊಡಗು ಸಂಗಾತಿ" ಯನ್ನು ಮುಂದೆ ತರಬೇಕು.

- ಪೂಜಾರಿರ ಗೋಪಾಲ, ಬೆಂಗಳೂರು.

ಆಕಾಶಕ್ಕಿಂತ ಅಗಲವಾದದ್ದು ಮನುಷ್ಯನ ಆಸೆ, ಭೂಮಿಗಿಂತ ತೂಕವಾದದ್ದು - ಸತ್ಯ ಮಾತ್ರ

# ಶಿಕ್ಷಣದ ಬಗೆಗಿನ ನಿರಾಸಕ್ತಿ ತೊಡೆದು ಹಾಕಬೇಕು

*ಅರಂತೋಡು ಕಾಲೇಜು ಪ್ರಾಂಶುಪಾಲ ಗಂಗಾಧರ ಕರೆ*

ಶಿಕ್ಷಣದ ಕುರಿತು ಸಮಾಜದಲ್ಲಿರುವ ನಿರಾಸಕ್ತಿಯನ್ನು ಹೋಗಲಾಡಿಸಲು ಪ್ರತಿಯೊಬ್ಬರು ಯತ್ನಿಸುವಂತೆ ಅರಂತೋಡಿನ ನೆಹರು ಸ್ಮಾರಕ ಪದವಿ ಪೂರ್ವ ಕಾಲೇಜಿನ ಪ್ರಾಂಶುಪಾಲ ಕುರುಂಜಿ ಗಂಗಾಧರ್ ಅವರು ಕರೆ ನೀಡಿದರು. ಇತ್ತೀಚೆಗೆ ನಗರದ ಸರಕಾರಿ ಪದವಿ ಪೂರ್ವ ಕಾಲೇಜಿನ ವಾರ್ಷಿಕೋತ್ಸವ ಸಮಾರಂಭದಲ್ಲಿ ಭಾಗವಹಿಸಿ ಅವರು ಮಾತನಾಡುತ್ತಿದ್ದರು.

ಮೂಲಭೂತ ಜ್ಞಾನದ ಕೊರತೆಯಿಂದ ವಿದ್ಯಾರ್ಥಿಗಳು ದುರಭ್ಯಾಸಕ್ಕೆ ದಾಸರಾಗುತ್ತಿದ್ದಾರೆ ಎಂದು ವಿಷಾದ ವ್ಯಕ್ತ ಪಡಿಸಿದ ಅವರು ಶಾಲೆಯಿಂದ ಹೊರ ಹೋಗುವಾಗ ವಿದ್ಯಾರ್ಥಿಗಳಿಗೆ ಮುಂದೇನು ಮಾಡುವದು ಎಂಬ ಬಗ್ಗೆ ಮಾಹಿತಿಯಿಲ್ಲದಂತಹ ಪರಿಸ್ಥಿತಿ ಇದೆ ಎಂದು ಅಭಿಪ್ರಾಯ ಪಟ್ಟರು. ಪ್ರತಿ ಮಕ್ಕಳಲ್ಲಿಯೂ ಸುಪ್ತ ಪ್ರತಿಭೆಯಿದ್ದು ಅದನ್ನು ಗುರುತಿಸಿ ಅದಕ್ಕೆ ತಕ್ಕಂತೆ ಅವರನ್ನು ತಯಾರು ಮಾಡಬೇಕೆಂದು ಸಲಹೆ ನೀಡಿದರು. ವಿದ್ಯಾರ್ಥಿಗಳು ನಿರಾಶವಾದಿಗಳಾಗದೆ ಹೊಸ ದೃಷ್ಟಿಕೋನ ಬೆಳೆಸಿಕೊಳ್ಳುವಂತೆ ಕರೆ ನೀಡಿದರು.

ಸಮಾರಂಭದ ಅಧ್ಯಕ್ಷತೆಯನ್ನು ಕಾಲೇಜಿನ ಪ್ರಾಂಶುಪಾಲೆ ರೇಖಾ ಕಾಳಯ್ಯ ಅವರು ವಹಿಸಿದ್ದರು. ಈ ಸಂದರ್ಭ ನಗರ ಕಾಂಗ್ರೆಸ್ ಅಧ್ಯಕ್ಷ ಗೋಕುಲನಾಥ ನಾಯಕ್, ಫೀ. ಮಾ., ಕಾರ್ಯಪ್ಪ ಕಾಲೇಜು ಪ್ರಾಂಶುಪಾಲ ಗೋವಿಂದ ನಾಯಕ್, ಎಂ. ಎ. ಉಸ್ಮಾನ್, ಎಸ್. ಬಿ. ಸಿ. ಸದಸ್ಯ ಚೆಲುವಯ್ಯ, ಮಹಮದ್ ಇಕ್ಬಾಲ್, ನಜೀರ್, ಎಸ್. ಎಂ. ಕೃಷ್ಣ ಹಾಗೂ ಶಾಲಾಭಿವೃದ್ಧಿ ಸಮಿತಿ ಅಧ್ಯಕ್ಷ ಕೋಳುಮುಡಿಯನ ಅನಂತ ಕುಮಾರ್ ಅವರುಗಳು ಉಪಸ್ಥಿತರಿದ್ದರು. ಬಹುಮಾನ ವಿತರಣಾ ಕಾರ್ಯಕ್ರಮವನ್ನು ಶಿಕ್ಷಕರಾದ ಡಿ. ಕೆ. ಮಂಜುಳ, ಕೆ. ಕಾವೇರಿ, ರೀಟಾ, ಸೋನ, ಹೇಮಲತ, ಕೃಪ, ಟಿ.ಕೆ. ಸಾವಿತ್ರಿ, ಗೀತ ಹಾಗೂ ಲಕ್ಷ್ಮಣ್ ಸಿಂಗ್ ಅವರುಗಳು ನಡೆಸಿಕೊಟ್ಟರು. ವಿದ್ಯಾರ್ಥಿಗಳಿಂದ ಆಕರ್ಷಕ ವಸ್ತು ಪ್ರದರ್ಶನ ಏರ್ಪಡಿಸಲಾಗಿತ್ತು.

ಲಾವಣ್ಯ ಹಾಗೂ ಶಿಲ್ಪ ಅವರುಗಳು ಪ್ರಾರ್ಥಿಸಿದರು. ಉಪನ್ಯಾಸಕ ಎಸ್. ಎಸ್. ಸಿದ್ಧರಾಜು ಅವರು ಸ್ವಾಗತಿಸಿದರು. ಬಿ. ಎಂ. ಬೆಳ್ಳಿಯಪ್ಪ ವರದಿ ವಾಚಿಸಿದರು.

ಸಭಾ ಕಾರ್ಯಕ್ರಮದ ಬಳಿಕ ವಿದ್ಯಾರ್ಥಿಗಳಿಂದ ಸಾಂಸ್ಕೃತಿಕ ಕಾರ್ಯಕ್ರಮಗಳು ಜರುಗಿದವು.

- ಕೆ. ವಿ. ಮಿಲನ್,

# ಜಾಗತಿಕ ಜಮಾಅತ ಅಹ್ಮದಿಯ ಸಂಘಟನೆಯ ಸಂಕ್ಷಿಪ್ತ ಪರಿಚಯ

ಅಹ್ಮದಿಯ ಜಮಾಅತು ಇಸ್ಲಾಮಿನ ಒಂದು ಸಾರ್ವತ್ರಿಕ ಸಂಘಟನೆಯಾಗಿದೆ. ಮಾನವ ಕಲ್ಯಾಣ ಕಾರ್ಯದಲ್ಲಿ, ಇದು ಸುಮಾರು ನೂರು ವರುಷಗಳಿಂದಲೂ ತಮ್ಮನ್ನು ತೊಡಗಿಸಿ ಕೊಂಡಿರುವುದು. ಇದರ ಶಾಖೆಯು ಪ್ರಪಂಚದ 178 ರಾಷ್ಟ್ರಗಳಲ್ಲಿರುವುದು. ಈ ಸಂಘಟನೆ ಆಧ್ಯಾತ್ಮ ಪ್ರಪಂಚ ವೊಂದನ್ನು ಸೃಷ್ಟಿಸುವ ನಿಟ್ಟಿನಲ್ಲಿ ತನ್ನ ಕಾರ್ಯ ಯೋಜನೆಯನ್ನು ರೂಪಿಸಿಕೊಂಡಿದೆ. 20 ಕೋಟಿ ಜನರನ್ನು ಇದು ತನ್ನ ಬಾಹುಗಳಲ್ಲಿ ಆಶ್ರಯ ನೀಡಿದೆ. ಈ ಆಧ್ಯಾತ್ಮಿಕ ಲೋಕದ ಜನರು ತಮ್ಮ ಕಾರ್ಯಕ್ಷೇತ್ರಗಳನ್ನು ವಿಸ್ತರಿಸುವ ನಿಟ್ಟಿನಲ್ಲಿ ಅವಿರತ ಶ್ರಮ ಪಡುತ್ತಿದ್ದಾರೆ.

ಇದು ಹೊಸ ಭೂಮಿ ಆಕಾಶವೊಂದನ್ನು ನಿರ್ಮಿಸುವ ತಾತ್ವಿಕತೆಯನ್ನು ಹೊಂದಿರುವುದು. ಪ್ರಪಂಚದ ಮಾನವ ಕೋಟಿಯ ಸುತ್ತ ಚೇತನವನ್ನು ಜಾಗೃತಪಡಿಸಿ ಸಂಪೂರ್ಣ ತೃಪ್ತಿ ಜೀವನವನ್ನು ಕೊಡುವುದು ಇದರ ಉದ್ದೇಶವಾಗಿದೆ. ಮಾನವನ ಹಕ್ಕು ಬಾಧ್ಯತೆಗಳನ್ನು ಪರಿಚಯಪಡಿಸಲು ಶ್ರಮಿಸುತ್ತಿದೆ.

ಜಮಾಅತ್ ಅಹ್ಮದಿಯೂ ಸಂಘಟನೆಯ ಸ್ಥಾಪಕರು ಅಹ್ಮದ್ ಖಾದಿಯಾನಿ. ಇವರ ಹುಟ್ಟೂರು ಹಿಂದುಸ್ಥಾನದ ಪಂಜಾಬ್ ರಾಜ್ಯದ ಗುರುದಾಸ್ಪುರ ಜಿಲ್ಲೆಯ ಖಾದಿಯಾನ್ ಎಂಬ ಕುಗ್ರಾಮವಾಗಿದೆ. ಇವರು ಈ ಕುಗ್ರಾಮದಲ್ಲಿ 1835ರಂದು ಜನಿಸಿದರು.

ಪ್ರಪಂಚದ ಎಲ್ಲಾ ಧರ್ಮಗಳೂ ನಿರೀಕ್ಷಿಸುವ ಅಂತ್ಯಕಾಲದ ಯುಗ ಪುರುಷರಾಗಿದ್ದಾರೆ. ಇವರು ಇಸ್ಲಾಮಿನಲ್ಲಿ ಅಂತ್ಯಕಾಲಘಟ್ಟದಲ್ಲಿ ಆಗಮೀಸಲಿರುವುದರ ಬಗ್ಗೆ ಇವರು ಮಹಮ್ಮದ್ ಮುಸ್ತಾಫ ಸಲೀರವರ ಭವಿಶ್ಯ ನುಡಿಯ ಈ ಸಬ್ಬೂ ಮರಿಯಂ, ಮಸೀಹೆಮಲೂದ್‌ನ ಈಸಾಯಿ ಸಮುದಾಯದ ಧರ್ಮ ಗ್ರಂಥಗಳಲ್ಲಿ ಸೂಚಿಸಿರುವ ಮಸೀಹಾ ಯಹೂದಿಯರ ಮಊದ್‌ದಾವುದ್ ಬುದ್ಧ ಸಮುದಾಯದ ಮೈಥ್ರಿ ಬುದ್ಧ, ಪಾರ್ಸಿ ಸಮೂದಾಯದ ಮುಸುಯೂದರ್ ಬಹ್ಮಿ ಮತ್ತು ಹಿಂದೂ ಸಮುದಾಯದ ಕಲ್ಕೀ ಅಂದರೆ ಕೃಷ್ಣ ಅವತಾರ ತಾನಾಗಿರುವೆನೆಂದು ಘೋಷಿಸಿರುವರು. ಈ ಸಂಗತಿಯು ಎಲ್ಲಾ ಧರ್ಮಗ್ರಂಥಗಳಲ್ಲಿಯೂ ಸೂಚಿಸಿರುವುದು ಆ ಕಾಲ ಘಟ್ಟದ ಗುಣಾವಶೇಷಗಳ ಪರಿಚಯಪಡಿಸಿರುವುದನ್ನೂ ನಾವು ಕಾಣಬಹುದು.

ಅಹ್ಮದಿಯೂ ಜಮಾಲಿತಿನ ಮೂಲ ಮಂತ್ರವು ಏಕದೈವಾ ರಾಧನೆ. ಎಲ್ಲಾ ಧರ್ಮಗಳ ಸಮನ್ವಯ, ಸಮುದಾಯದ ಐಕ್ಯತೆ, ದಯಾಗುಣ, ವಿಶ್ವದಲ್ಲಿನ ಕುಸಿದ್ಧಾಂತ ಆಧ್ಯಾತ್ಮ ಪ್ರಪಂಚದ ನವ ನಾಗರಿಕತೆಯ ಸ್ಥಾಪನೆ ಇವರ ಗುರುಯಾಗಿದೆ. ಈ ಮಹೋನ್ನತ ಮಾನವೀಯ ಸಾಮ್ರಾಜ್ಯ ಸ್ಥಾಪನೆಯ ಗುರಿಯನ್ನಿಟ್ಟುಕೊಂಡು ಈ ಸಂಘಟನೆಯ ಕರ್ತರು. ತಮ್ಮ ಪ್ರಚಾರ ಕಾರ್ಯದಲ್ಲಿ ಕಾರ್ಯಪ್ರವರ್ತನೆಗಳನ್ನು ರೂಪಿಸಿಕೊಂಡು ವಿಶ್ವದಾದ್ಯಂತ ಟೊಂಕಕಟ್ಟಿ ಕಾರ್ಯತತ್ಪರ ರಾಗಿದ್ದಾರೆ.

- ಮಹಮ್ಮದ್

ಔದ್ಯೋಗಿಕರಣ, ನಗರೀಕರಣಗಳು ರಾಷ್ಟ್ರ ಜೀವನ ಚರಿತ್ರೆಯನ್ನೆಲ್ಲಾ ನುಂಗಿ ನೊಣೆಯುತ್ತಿವೆ.

# ಔಷಧ ಮತ್ತು ಅದರ ದುರುಪಯೋಗ

ರೋಗಿಗಳಿಗೆ ಔಷಧ ಎಂದರೆ ಅಪರಿಚಿತವೇನಲ್ಲ. ರೋಗಗಳು ಗುಣ ಹೊಂದಲು ಔಷಧಗಳು ಬೇಕೆ ಬೇಕು. ಇನ್ನು ಕೆಲವು ರೋಗವು ಔಷಧ'ವಿಲ್ಲದೆ ತನ್ನಷ್ಟಕ್ಕೆ ಗುಣ ಹೊಂದಬಹುದು.. ಇದೆಲ್ಲವನ್ನು ದೃಢಪಡಿಸುವವನು ವೈದ್ಯನಾಗಿರುತ್ತಾನೆ ಮತ್ತು ಅದರ ಸಹಾಯಕರಾಗಿರುತ್ತಾರೆ. (Para Medicals)

ಕೆಲವೊಂದು ಬಾರಿ ಅಥವ ಕೆಲವರು ಸ್ವತಃ ಅವರೇ ವೈದ್ಯ ಪರಿಣತಿ ಹೊಂದಿದವರಾಗಿರುತ್ತಾರೆ. ಔಷಧಿ ಅಂಗಡಿಗಳಿಗೆ ಹೋಗಿ, ನನಗೆ ಆ ಮಾತ್ರೆ ಕೊಡಿ, ಈ ಮಾತ್ರೆ ಕೊಡಿ ಎಂದು ವಿಚಾರಿಸಿ ಅವನಿಂದ ಒಳ್ಳೆಯ ಕಂಪೆನಿಯ (Brand) ಮತ್ತು ಬೇಗನೆ ಕಾಯಿಲೆ ವಾಸಿಯಾಗುವಂತಹ Strong ಆದ Tablet ಕೊಡಿ ಎಂದು ಕೇಳುವವರು ದಿನಕ್ಕೆ ಹಲವಾರು ಜನರು ಕಾಣುತ್ತಾರೆ. ಇದರಲ್ಲಿ ಕೆಲವರು ಬುದ್ಧಿವಂತರು ಮತ್ತು ಅತೀ ಮೇಧಾವಿಗಳೆಂದು ತೋರಿಸಲು ಔಷಧಿ ಅಂಗಡಿಯಲ್ಲಿ ಮಾರುವವನಿಗೆ (Sales Man) ಪ್ರಶ್ನೆಗಳನ್ನು ಹಾಕುತ್ತಾರೆ. ಔಷಧ ಅಂಗಡಿಯವನಿಗೆ ಈ ತರಹದ ಜನರು ಸಿಕ್ಕಿದರೆ ಅವನ ಸಂತೋಷಕ್ಕೆ ಪಾರವೇ ಇಲ್ಲ. ಅವನು ಇದ್ದಿದರಲ್ಲಿ ಹೆಚ್ಚು ದುಡ್ಡನ್ನು ತರಬಲ್ಲ ಔಷಧಿಯನ್ನು ತೆಗೆದುಕೊಡುತ್ತಾನೆ. ಇದರಿಂದ ರೋಗಿಯು ಸಂತುಷ್ಟನಾಗಿ ಆ ಡಾಕ್ಟ್ರ ಬಳಿ ಹೋದರೆ ಅವನಿಗೆ ಫೀಸು (Fees) ಬೇರೆ ಕೊಡಬೇಕು. ಇಲ್ಲಿಯಾದರೆ ಅವೆಲ್ಲ ಉಳಿದು ಒಳ್ಳೆಯ ಔಷಧಿಯನ್ನು ಪಡೆದೆ ಎಂದು ಹೆಮ್ಮೆ ಪಟ್ಟುಕೊಳ್ಳುತ್ತಾನೆ. ಕೆಲವರು ಇನ್ನೂ ಮುಂದೆ ಹೋಗಿ ಬ್ರಾಂದಿ ಷಾಪ್‌ನಲ್ಲಿ ಕಾಣಸಿಗುತ್ತಾರೆ. ಇವರ ಬಳಿ ಕೇಳಿದರೆ ತಲೆನೋವು, ಜ್ವರ, ಶೀತಕ್ಕೆ ಇದೆಲ್ಲ ದಿವ್ಯ ಔಷಧಿ ಎಂದು ಹೇಳುತ್ತಾರೆ ಮತ್ತು ಬೇರೆಯವರಿಗೆ ತಿಳುವಳಿಕೆ ಹೇಳುತ್ತಾರೆ.

ಇಲ್ಲಿಯವರೆಗೆ ಎಲ್ಲವೂ ಯತಾಸ್ಥಿತಿಯಲ್ಲಿ ನಡೆಯುತ್ತಿರುತ್ತದೆ. ಇವೆಲ್ಲರ ಪರಿಣಾಮ ರೋಗಿಯ ಮೇಲೆ ಏನೂ ಬೀರದ ಇದ್ದಲ್ಲಿ ಕೊನೆಗೆ ಡಾಕ್ಟ್ರೇ ಬೇಕೆಂದು ಹಲವರ ಬಳಿ ವಿಚಾರಿಸುತ್ತಾನೆ. ಅವನಿಗೆ ಒಂದೇ ಭೇಟಿಯಲ್ಲಿ (First Visit) ಕಾಯಿಲೆ ವಾಸಿ ಮಾಡುವಂತಹ ಡಾಕ್ಟ್ರೇ ಆಗಬೇಕು.

ಗಮನವಿರಿಸಬೇಕಾದ ಅಂಶಗಳು :

ಔಷಧಗಳು ರೋಗದಿಂದ ನಮ್ಮನ್ನು ಮುಕ್ತಗೊಳಿಸಿ, ಆರೋಗ್ಯ ವಂತನನ್ನಾಗಿಸುತ್ತದೆ. ಔಷಧಿ ವಿಲ್ಲದಿದ್ದರೆ ರೋಗವು ಉಲ್ಬಣಿಸಿ ನಮ್ಮ ಪ್ರಾಣಕ್ಕೆ ಅಪಾಯವಾಗಬಹುದು. ಆದರೆ ಅನಾವಶ್ಯಕವಾಗಿ ಔಷಧ ಸೇವಿಸುವುದು, ವಿವಿಧ ಬಗೆಯ ಔಷಧ ಸೇವಿಸುವುದು ಅಥವಾ ವೈದ್ಯ ಗೊತ್ತುಪಡಿಸಿದ ಅಥವಾ ನಿಗದಿದಿಂತ ಹೆಚ್ಚಿನ ಪ್ರಮಾಣದಲ್ಲಿ ಸೇವಿಸುವುದು ದುಷ್ಪರಿಣಾನವಾಗಬಹುದಲ್ಲದೆ, ಅಪಾಯಕಾರಿಯೂ ಹೌದು ಎನ್ನುವುದು ಬಹಳ ಜನರಿಗೆ ಗೊತ್ತಿಲ್ಲ.

ಕ್ಲಪ್ತ ಸಮಯದಲ್ಲಿ ವೈದ್ಯರ ಬಳಿಗೆ ಹೋಗದೆ ರೋಗವು ಅತಿಯಾಗಿ ಖರ್ಚುವೆಚ್ಚಗಳೂ ಜಾಸ್ತಿಯಾಗಬಹುದು. ನಿಮ್ಮ ಶರೀರದ ಯಾವುದಾದರು ಒಂದು ಭಾಗವು ನಿಷ್ಕ್ರಿಯ ವಾಗಬಹುದು ಅಥ'ವಾ ಚಿಕಿತ್ಸೆಯ ಮೂಲಕ ಕಳೆದು ಕೊಳ್ಳಬಹುದು. ಚಿಕಿತ್ಸೆಯೂ ಫಲಕಾರಿಯಾಗದೆ ಇರಬಹುದು. ಸರಿಯಾದ ರೀತಿಯಲ್ಲಿ ಮಾತ್ರೆಗಳು ದೇಹಕ್ಕೆ ಹೊಂದಿಕೊಳ್ಳದೆ ಇರಬಹುದು. ಅನಿಯಂತ್ರಿತ ಮಾತ್ರೆ ಸೇವನೆಯಿಂದ ದೇಹಕ್ಕೆ ನಿರೋಧಕ ಶಕ್ತಿ (Drug Resistance)ಬಂದು ಹಲವು ರೀತಿಯ ಮಾತ್ರೆಯನ್ನು ವೈದ್ಯರು ಪ್ರಯೋಗಿಸಬೇಕಾಗುತ್ತದೆ.

ಗರ್ಭಿಣಿ ಹೆಂಗಸರು ಯಾವತ್ತೂ ಔಷಧಿ ಅಂಗಡಿಯಿಂದ ನೇರವಾಗಿ ವೈದ್ಯರ ಭೇಟಿಯಾಗದೆ ಯಾವ ಮಾತ್ರೆಯನ್ನು ತೆಗೆದುಕೊಳ್ಳಬೇಡಿ. ನಿಮ್ಮ ಹುಟ್ಟುವ ಮಗುವಿನ ಆರೋಗ್ಯವೂ ಮುಖ್ಯ. ಕೆಲವು ರೋಗವು ಮತ್ತು ನ್ಯೂನತೆಗಳಿಗೆ ಮಾತ್ರೆಗಳೇ ಕಾರಣವಾಗುತ್ತದೆ. ಇದರಲ್ಲಿ ಮುಖ್ಯವಾಗಿ ಹಲ್ಲಿನ ರಚನೆ ಮತ್ತು ಬಣ್ಣದಲ್ಲಿ ವ್ಯತ್ಯಾಸ ಕಂಡುಬರುತ್ತದೆ.

ರೋಗವು ಮನುಷ್ಯನಲ್ಲಿ ಕಂಡುಬಂದರೆ ಅದಕ್ಕೆ ಹಲವಾರು ಕಾರಣಗಳಿರುತ್ತದೆ. ಅದರ ಮೂಲ ಸ್ವರೂಪವನ್ನು ನೋಡದೆ ಔಷಧವನ್ನು ಸೇವಿಸುವುದು ನಿರುಪಯೋಗ. ಕೆಲವೊಂದು ಬಾರಿ ನಿಮ್ಮ ಪ್ರಯತ್ನ ಸಫಲವಾಗಬಹುದು. ಅಥವಾ ಇನ್ನೊಂದು ರೋಗವನ್ನು ಆಹ್ವಾನಿಸಿದಂತಾಗಬಹುದು. ಯಾವುದಕ್ಕೂ ರೋಗದ ಲಕ್ಷಣಗಳನ್ನು (Primary Symptoms) ಕಂಡು ಹಿಡಿಯುವುದು ಮುಖ್ಯ.

ರೋಗಿಯ ರೋಗ ನಿರೋಧಕ ಶಕ್ತಿಯು ದೇಹದಲ್ಲಿ ಕಡಿಮೆಯಾದಲ್ಲಿ ಹಲವಾರು ರೋಗಾಣುಗಳು ಸುತ್ತ ಮುತ್ತಲಿನ ವಾತಾವರಣದಿಂದ ನಮ್ಮ ದೇಹವನ್ನು ಪ್ರವೇಶಿಸಿ ಕಾಯಿಲೆಗಳಿಗೆ ಎಡೆಮಾಡಿಕೊಡುತ್ತದೆ. ಸಾಮಾನ್ಯವಾಗಿ ಹಲ್ಲುನೋವು, ತಲೆನೋವು ಎಂದು ಹಲವರು ನೋವಿನ ಮಾತ್ರೆಗಳನ್ನು (Pain Killer) ಔಷಧಿ ಅಂಗಡಿಯಿಂದ ದಿನ ನಿತ್ಯ ಸೇವಿಸುತ್ತಾರೆ. ಇದರಿಂದ ತಲೆನೋವು ಮತ್ತು ಇತರ ನೋವು ವಾಸಿಯಾದಂತೆ ಕಂಡು ಬಂದರೂ ಕೆಲವರು ನನಗೆ ಟಾನಿಕ್ ಕೊಡಿ ಡಾಕ್ಟ್ರೇ ತುಂಬಾ ನಿಶ್ಶಕ್ತಿ ಎಂದು ಹೇಳುತ್ತಾರೆ. ಆದರೆ ಇದರಿಂದ ಅವನ ಖಾಯಿಲೆ ವಾಸಿ ಆದಂತಾಗುವುದಿಲ್ಲ. ದೇಹಕ್ಕೆ ಎಷ್ಟು ವಿಟಮಿನ್‌ಗಳು ಬೇಕೋ ಅಷ್ಟನ್ನು ಮಾತ್ರ ದೇಹವು ಪಡೆದುಕೊಳ್ಳುತ್ತದೆ. ಮತ್ತೆಲ್ಲವೂ ಮಲ ಮೂತ್ರದ ಮೂಲಕ ಹೊರ ಹೋಗುತ್ತದೆ. ಹೆಚ್ಚಾಗಿ ಸೇವಿಸಿದ ವಿಟಮಿನ್‌ಗಳಿಂದ ನಮಗೆ ಯಾವ ಲಾಭವೂ ಇಲ್ಲ. ಆದ್ದರಿಂದ ಅನಾವಶ್ಯಕವಾಗಿ ಟಾನಿಕ್ ಸೇವಿಸುವ ಬದಲು ನಮ್ಮ ಆಹಾರದಲ್ಲಿ ಹಸಿರು ತರಕಾರಿ, ಸೊಪ್ಪು, ಹಾಲು, ಹಣ್ಣುಗಳು ಮತ್ತು ಮಾಂಸಹಾರಿಗಳಾದರೆ ಮೊಟ್ಟೆ, ಮೀನು, ಮಾಂಸವನ್ನು ಸೇವಿಸುವುದು ಮನುಷ್ಯನನ್ನು ಆರೋಗ್ಯ ವನ್ನಾಗಿಸುತ್ತದಲ್ಲದೆ ಹಣವನ್ನು ಉಳಿಸುತ್ತದೆ.

ಹಲವಾರು ರೀತಿಯ ನಕಲಿ ವೈದ್ಯರನ್ನು ಊರುಗಳಲ್ಲಿ ಪೇಟೆ ಪಟ್ಟಣಗಳಲ್ಲಿ ನೋಡಬಹುದು. ಇಲ್ಲಿ ಎಲ್ಲಾ ರೀತಿಯ ಕಾಯಿಲೆಗಳನ್ನು ಗುಣಪಡಿಸಲಾಗುತ್ತದೆ ಎಂದು ಬರೆದಿರುತ್ತಾರೆ.

ಪ್ರಪಂಚದಲ್ಲಿ ಪ್ರತಿಯೊಬ್ಬ ಮಾನವನಿಗೂ ಯಜಮಾನನೆನ್ನಿಸಿಕೊಳ್ಳುವುದು ಅವನ ಗುರಿಗಳೇ ಹೌದು

ಇಂಥವರಿಗೆ ಔಷಧಿಯ ಯಾವ ಜ್ಞಾನವೂ ಇರುವುದಿಲ್ಲ. ಪರಿವಾನಿಗೆಯೂ ಇರುವುದಿಲ್ಲ. ಮೇಲಾಗಿ ನಿರ್ದಿಷ್ಟವಾದ ಔಷಧಿಯನ್ನು ಇಂತಷ್ಟೇ ಪ್ರಮಾಣದಲ್ಲಿ ಕೊಡಬೇಕೆಂದು ಗೊತ್ತಿರುವುದಿಲ್ಲ. ರೋಗಿಯು ಇವರುಗಳಿಗೆ ಪ್ರಯೋಗ ಶಾಲೆ ಇದ್ದಂತೆ. ಹಲವಾರು ಔಷಧಿಯನ್ನು ಪ್ರಯೋಗಿಸಿ ನೋಡುತ್ತಾರೆ. ರೋಗಿಯು ಔಷಧಿಯ ದುಷ್ಪರಿಣಾಮಗಳಿಂದ ನಿಧಾನಗತಿಯಲ್ಲಿ ಅಥವ ತ್ವರಿತಗತಿಯಲ್ಲಿ ತಮ್ಮ ಜೀವವನ್ನೇ ಬಲಿ ತೆಗೆದುಕೊಂಡ ಹಲವು ನಿರ್ದಶನಗಳಿವೆ.

*ಪಾಲಿಸಬೇಕಾದ ಅಂಶಗಳು :*

1. ಯಾವತ್ತೂ ಸ್ವತಃ ಔಷಧಿ ಅಂಗಡಿಯಿಂದ ವೈದ್ಯರ ಸಮ್ಮತಿ ಅಥವಾ ಚೇಟಿ (Prescription Slip) ಇಲ್ಲದೆ ಔಷಧಿಯನ್ನು ಕೊಳ್ಳಬೇಡಿ.
2. ನಿಗದಿಗಿಂತ ಜಾಸ್ತಿಯಾಗಿ ಮಾತ್ರೆಯನ್ನು ಸೇವಿಸಬೇಡಿ.
3. ವೈದ್ಯರು ಕೊಟ್ಟಷ್ಟು ದಿವಸವೂ ಮಾತ್ರೆಯನ್ನು ಮಧ್ಯದಲ್ಲಿ ನಿಲ್ಲಿಸದೆ ಮುಂದುವರಿಸಿ ಇಲ್ಲದಿದ್ದಲ್ಲಿ ನಿಮ್ಮ ದೇಹಕ್ಕೆ Drug Resistance ಬಂದು ಮುಂದೆ ಔಷಧಿಯ ಪರಿಣಾಮ ಬೀರದೆ ಇರಬಹುದು.
4. ಔಷಧಿಯ ಸಮಯದಲ್ಲಿ ಮದ್ಯಪಾನ ಮತ್ತು ಧೂಮಪಾನದಿಂದ ಮುಕ್ತವಾಗಿರಿ (ದೂರವಿರಿ)
5. ಸ್ವಚ್ಛವಾದ ನೀರು ಮತ್ತು ಆಹಾರವನ್ನು ಸೇವಿಸಿ, ಆಹಾರದಲ್ಲಿ ಪೌಷ್ಠಿಕಾಂಶಗಳು ಸೇರಿರಲಿ
6. ಔಷಧಿಯು ದೇಹಕ್ಕೆ ಹಿಡಿಸದಿದ್ದಲ್ಲಿ, ಮುಂದುವರೆಸದೆ ತಕ್ಷಣ ವೈದ್ಯರನ್ನು ಭೇಟಿಯಾಗಿ.
7. ನಾಚಿಕೆ ಮತ್ತು ಭಯದಿಂದ ನಿಮ್ಮ ರೋಗವನ್ನು ಗುಪ್ತವಾಗಿರಿಸಬೇಡಿ, ವೈದ್ಯರ ಬಳಿ ಸಮಲೋಚಿಸಿ ಸೂಕ್ತ ಪರಿಹಾರ ಪಡೆಯಿರಿ.

-ಡಾ. ರಿತೇಶ್ ಬಿಳಿಮಲೆ, ಮಡಿಕೇರಿ.

## ಕೊಡಗಿನ ಬಿ. ಯು. ಚಂಗಪ್ಪ ಅವರಿಗೆ ಅತಿ ವಿಶಿಷ್ಟ ಸೇವಾ ಪದಕ ಪ್ರಧಾನ

ಭಾರತೀಯ ವಾಯುಪಡೆಯಲ್ಲಿ ಏರ್‌ವೈಸ್ ಮಾರ್ಷಲ್ ಆಗಿರುವ ಜಿಲ್ಲೆಯ ಬಲ್ಲಟಿಕಾಳಂಡ ಯು. ಚಂಗಪ್ಪ ಅವರಿಗೆ ರಾಷ್ಟ್ರಪತಿಗಳ ಅತಿ ವಿಶಿಷ್ಟ ಸೇವಾ ಪದಕ ಲಭ್ಯವಾಗಿದೆ.

ಸೇನೆಯಲ್ಲಿನ ಅತ್ಯುತ್ತಮ ಸೇವೆಗಾಗಿ ಶ್ರೀಯುತರಿಗೆ ಅತಿ ವಿಶಿಷ್ಟ ಸೇವಾಪದಕ ದೊರೆತಿದ್ದು, ಜನವರಿ 26 ರ ಗಣರಾಜ್ಯೋತ್ಸವದಂದು ಈ ಗೌರವವನ್ನು ರಾಷ್ಟ್ರಪತಿ ಎ. ಪಿ. ಜೆ. ಅಬ್ದುಲ್ ಕಲಾಂ ಪ್ರಧಾನ ಮಾಡಿದರು. ಚಂಗಪ್ಪ ಅವರು ವೀರಾಜಪೇಟೆಯ ನಿವಾಸಿಯಾಗಿದ್ದಾರೆ.

## ಎಂ. ಎಸ್. ಡಬ್ಲ್ಯುನಲ್ಲಿ ಚಿನ್ನದ ಪದಕ



ಮಡಿಕೇರಿ ತಾಲ್ಲೂಕು ಕಟ್ಟೆಮಾಡು ಗ್ರಾಮದ ಬಿ. ಯು. ಕಾಂಚನರವರು, ಮೈಸೂರು ವಿಶ್ವವಿದ್ಯಾನಿಲಯದ "ಮಾಸ್ಟರ್ ಆಫ್ ಸೋಷಿಯಲ್ ವರ್ಕ್" (ಎಂ. ಎಸ್. ಡಬ್ಲ್ಯು)ನ ಮಾನಸಿಕ ವಿಭಾಗದ ಪರೀಕ್ಷೆಯಲ್ಲಿ ಚಿನ್ನದ ಪದಕ ಗಳಿಸಿದ್ದಾರೆ. ಈಕೆ ಬಿದ್ರುಪಣೆ ಉಲ್ಲಾಸ ಹಾಗೂ ಕಾಂತಿ ಉಲ್ಲಾಸರವರ ಪುತ್ರಿ.

## ದೈಹಿಕ ಶಿಕ್ಷಣದಲ್ಲಿ ಚಿನ್ನದ ಪದಕ



2002-03 ನೇ ಸಾಲಿನ ಸ್ನಾತಕೋತ್ತರ ದೈಹಿಕ ಶಿಕ್ಷಣ ವಿಭಾಗದಲ್ಲಿ ಕಟ್ಟೆಮಾಡುವಿನ ಕೆ. ಎ. ಈಶ್ವರ ಅವರಿಗೆ ಚಿನ್ನದ ಪದಕ ಲಭಿಸಿದೆ.

ಪ್ರಸ್ತುತ ಮಂಗಳೂರಿನ ಫಿಶರೀಸ್ ಕಾಲೇಜಿನ ದೈಹಿಕ ಶಿಕ್ಷಣ ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿರುವ ಈಶ್ವರ್ ಅವರು, ಕಟ್ಟೆಮಾಡುವಿನ ಕರ್ಣೇಯ್ಯನ ಅಶೋಕ್ ಹಾಗೂ ನಂಜಮ್ಮ ದಂಪತಿಯ ಪುತ್ರರಾಗಿದ್ದಾರೆ.

## ಮೇಜರ್ ಬೊಳ್ಳಚೆಟ್ಟಿರ ರಂಜನ್ ಚಂಗಪ್ಪ ಅವರಿಗೆ ಶೌರ್ಯ ಚಕ್ರ ಪ್ರಶಸ್ತಿ



ಭಾರತ-ಪಾಕಿಸ್ತಾನ ಗಡಿ ಪ್ರದೇಶವಾದ ಕಾಶ್ಮೀರದ ಪೂಂಚ್‌ನಲ್ಲಿ ಭಯೋತ್ಪಾದಕರ ವಿರುದ್ಧ ನಡೆದ ಕಾರ್ಯಾಚರಣೆ ಯಲ್ಲಿ ಅಪ್ರತಿಮ ಶೌರ್ಯವನ್ನು ಮೆರೆದ ಮೇಜರ್ ಬೊಳ್ಳಚೆಟ್ಟಿರ ರಂಜನ್ ಚಂಗಪ್ಪ ಅವರಿಗೆ ರಾಷ್ಟ್ರಪತಿ ಅವರು ಕೊಡಮಾಡುವ ಪ್ರತಿಷ್ಠಿತ ಶೌರ್ಯಚಕ್ರ ಪ್ರಶಸ್ತಿ ಲಭ್ಯವಾಗಿದೆ.

ಪ್ರಸ್ತುತ ರಾಜಸ್ಥಾನದ ಬಿಕಾನೀರ್ ನಲ್ಲಿರುವ ಆರ್ಟಿಲರಿ ಬ್ರಿಗೇಡ್ ಹೆಡ್ ಕ್ವಾರ್ಟರ್ಸ್‌ನಲ್ಲಿ ಜನರಲ್ ಸ್ಟಾಫ್ ಆಫೀಸರ್ ಆಗಿ ಕಾರ್ಯ ನಿರ್ವಹಿಸುತ್ತಿರುವ ಇವರು ಮೂಲತಃ ಬಲಮುರಿ ಗ್ರಾಮದ ದಿ. ಕ್ಯಾಪ್ಟನ್ ಬೊಳ್ಳಚೆಟ್ಟಿರ ಸಿ. ಚಂಗಪ್ಪ (ಲಾಲು) ಹಾಗೂ ರಾಣಿ ದಂಪತಿಯರ ಪುತ್ರರಾಗಿದ್ದಾರೆ.

**ಖ್ಯಾತ ಆಂಗ್ಲ ಕವಿ ಕೀಟ್ಸ್ ಮೊದಲು ಲಂಡನ್‌ನ ಗೈಸ್ ಚಿಕಿತ್ಸಾ ಗೃಹದಲ್ಲಿ ಗಾಯಗಳಿಗೆ ಪಟ್ಟಿ ಕಟ್ಟುವವರಾಗಿ ಕೆಲಸ ಮಾಡುತ್ತಿದ್ದ.**

# ಹತ್ತು ಕುಟುಂಬ ಹದಿನೆಂಟು ಗೌತ್ರದ ಗೌಡ ಜನಾಂಗದವರ ಮದುವೆಯಲ್ಲಿ ವಧುವನ್ನು ವರನ ಕಡೆಯ ಮುಖ್ಯಸ್ಥರಿಗೆ ಒಪ್ಪಿಸುವ ಕ್ರಮ.

***ಹೆಣ್ಣಿನ ಕಡೆಯವರು*** : ಪರಮ ವೈಭವದಿಂದ ತಮ್ಮ ಇಷ್ಟ ಮಿತ್ರರಿಂದೊಡಗೂಡಿ, ಪುರುಷನ ಕಡೆಯಿಂದ ಆಗಮಿಸಲ್ಪಟ್ಟ ದಿಬ್ಬಣದ ಮುಖ್ಯಸ್ಥರಾದ ಮಹನೀಯರು ಯಾರಯ್ಯ?

***ಗಂಡಿನ ಕಡೆಯವರು***: ನಾವಯ್ಯ

ಹೆ.ಕ. : ಯಾವ ನಾಡು, ಯಾವ ಊರು, ಯಾವ ಮನೆಯವರು? (ಸೂಕ್ತವಾದ ಪರಿಚಯ)

ಹಾಗಾದರೆ ನಮ್ಮ ಪೂರ್ವಪದ್ಧತಿಯಂತೆ, ವಿಜ್ಞಾಪನೆಯನ್ನು ಸ್ವೀಕರಿಸಿ, ಚಂದ್ರರಾಜನೆಂಬ ಪುರುಷನಿಗೆ ಪದ್ಮಾವತಿ ಎಂಬ ಕನ್ನಿಕೆಯನ್ನು ವಧೂ ವರರಾಗಿ ಮಾಡುವುದೆಂದು ಈ ಮೊದಲು ಮನದತ್ತ ಮಾಡಿ, ಆಮೇಲೆ ವಾಗ್ದತ್ತ ಮಾಡೋಣವಾಯ್ತು ಅಲ್ಲವೋ?

ಗ. ಕ. :ಹೌದು.

ಹೆ. ಕ. :ವಾಗ್ದತ್ತ ಮೇರೆಗೆ ನಾವು ಉಭಯಸ್ಥರು ಕೂಡಿ ಆಕಾಶದಷ್ಟು ದೊಡ್ಡ ಚಪ್ಪರ ಹಾಕಿ, ಭೂಮಿಯಷ್ಟು ದೊಡ್ಡ ಹಸೆಬರೆದು ರತ್ನಖಚಿತವಾದ ಮಂಟಪದಡಿಯಲ್ಲಿ ಸಮಸ್ತ ಬಂಧು ಬಾಂಧವರ ಸಮಕ್ಷಮದಲ್ಲಿ ಅಗ್ನಿಸಾಕ್ಷಿಯಾಗಿ ನಮ್ಮ ಕನ್ಯಾರತ್ನವನ್ನು ಧಾರೆಯೆರೆದು ಕೊಟ್ಟಿದ್ದೇವಷ್ಟೆ!

ಗ. ಕ. : ಹೌದು

ಹೆ. ಕ.: ಸಭಿಕರೇ, ನಾನು ಹೇಳುವ ಮಾತುಗಳನ್ನು ನೀವುಗಳು ಕೇಳಿಕೊಂಡು ತಪ್ಪುಗಳಿದ್ದರೆ ಮನ್ನಿಸಿ, ಭಾಗ್ಯ ಸಂಪನ್ನರಾದ ಮತ್ತು ಮಹಾನುಭಾವರಾದ ತಾವುಗಳು ನನಗೆ ತಿಳಿಸಬೇಕಾಗಿ ಪ್ರಾರ್ಥಿಸುತ್ತೇನೆ.

ಅಯ್ಯಾ, ನಮ್ಮ ಕನ್ಯೆಯು ಹಾಲನ್ನವನ್ನು ಊಟ ಮಾಡಿಕೊಂಡು, ತೂಗು ಮಂಚದ ಹಾಸಿಗೆಯ ಮೇಲೆ ಮಲಗಿ, ಯಾವಾಗಲೂ ಅಲಂಕರಿಸಿಕೊಂಡು, ಕಷ್ಟ ಸುಖಗಳನ್ನರಿಯದೆ ಸುಖ ಸಂಪತ್ತಿನಿಂದ ಬಾಳುತಿದ್ದು, ಜನಕರಾಯನಲ್ಲಿ ಸೀತಾದೇವಿಯು ಮೆರೆಯು ತ್ತಿದ್ದಂತೆ, ತನ್ನ ತಂದೆ ತಾಯಿಯರ ಮನಸ್ಸನ್ನು ಸಂತೋಷಗೊಳಿಸುತ್ತಾ ಕತ್ತಲೆಯ ಹೊತ್ತಿನಲ್ಲಿ ಭೂಮಿಗೆ ಚಂದ್ರನು ಹೇಗೆ ಪ್ರಕಾಶವನ್ನು ಕೊಡುತ್ತಿದ್ದಾನೋ ಅದೇ ರೀತಿ ತನ್ನ ಕುಟುಂಬಕ್ಕೆ ಸಂತೋಷವನ್ನು ಕೊಡುತ್ತಿದ್ದಳು. ಆದರೆ ಋಷ್ಯಾಶ್ರಮದಲ್ಲಿ ಶ್ರೀರಾಮ ವಿದ್ಯಾ ಶಾಸ್ತ್ರಗಳನ್ನು ಕಲಿತು ದಿವ್ಯ ಸಂಪನ್ನನಾಗಿ ಮೆರೆಯುತ್ತಿರುವ ನಿಮ್ಮ ಬಾಲಕನಿಗೆ ನಮ್ಮ ಕನ್ನಿಕೆಯನ್ನು ಕೊಡಬೇಕೆಂದು, ನಾವು ಉಭಯ ಕಡೆಯವರು ಕೂಡಿ ಜಾತಕ ಕೂಟ, ಮುಹೂರ್ತವನ್ನು ನೋಡುವಂತೆ ಪುರೋಹಿತರನ್ನು ಆಳು ಬಿಟ್ಟು ಕಳುಹಿಸಿ, ನಮ್ಮ ನಾಲ್ಕು ಕಟ್ಟು ಕಯ್ಯಾಲೆ ಬಾಡೆಯಲ್ಲಿ ಬಣ್ಣದ ಚಾಪೆ ಹಾಕಿ, ಸಣ್ಣಕ್ಕಿ ತುಂಬಿದ ತಟ್ಟೆ ಮೇಲೆ ನಂದಾದೀಪವನ್ನಿರಿಸಿ ಜಾತಕ ಗಣಕೂಟ ಮುಹೂರ್ತವನ್ನು ನೋಡಿದಲ್ಲು, ನಮ್ಮ ಹೆಣ್ಣಿಗೂ ನಿಮ್ಮ ಗಂಡಿಗೂ ಸುಖ ಸಂಪನ್ನರಾಗಿ ಬಾಳುವ ಯೋಗವಿದ್ದುದರಿಂದ ನಾವುಗಳು ಬಂಧು ಮಿತ್ರರಿಗೆ ಹೇಳಿಕಳುಹಿಸಿ, ಕಾಗದ ಪತ್ರಗಳಿಂದ ಕರೆಯಿಸಿಯೂ ನಿಮ್ಮ ಭವನದಿಂದ ನಮ್ಮ ಭವನಕ್ಕೆ ದಿಬ್ಬಣಾಡಿ ಬಂದಿದ್ದೀರಿ

ಗ. ಕ. :ಹೌದು

ಹೆ. ಕ. : ಆದರೆ ಆ ನಿಮ್ಮ ಬಾಲಕನಿಗೆ ಸಾವಿರಾರು ವರಹದ ಚಿನ್ನಾಭರಣಗಳಿಂದ ಅಲಂಕರಿಸಿ, ನಮ್ಮ ಸ್ವಾಧೀನಕ್ಕೆ ಕೊಟ್ಟ ಮೇಲೆ, ನಮ್ಮ ಮನೆ ದೇವರ ಅನುಗ್ರಹದಿಂದಲೂ ಮಹಾನುಭಾವರಾದ ಸಭಿಕರ ಕರುಣ ಕಟಾಕ್ಷದಿಂದಲೂ ಇದೇ ಭವನದ ಮುಂದುಗಡೆ ಹಾಕಿರುವ ಹನ್ನೆರಡು ಕಂಬಗಳ ಸೀತಾವಳಿ ಕಯ್ಯಾಲೆ ಚಪ್ಪರದ ಮೇಲ್ಕಟ್ಟಿಗೆಯಲ್ಲಿ ನಾವುಗಳು ಎಂದರೆ ಉಭಯ ಕಡೆಯವರು ಸಾಲುಕಟ್ಟಿ ನಿಂತು ಕನ್ಯೆ ಕೈಧಾರೆ ವ್ರತಗಳನ್ನು ಮಾಡಿ, ನೀವು ತಂದಿರುವ ದ್ವಯ ಹಸ್ತಗಳನ್ನು ಚತುರ್ಹಸ್ತಗಳನ್ನಾಗಿ ಮಾಡಿದ್ದೇವೆ.

ಗ. ಕ. :ಹೌದು

ಹೆ. ಕ. : ಆದರೆ ರೂಪದಲ್ಲಿ ಮನ್ಮಥನಿಗೆ ಹೋಲುವ ನಿಮ್ಮ ಪುರುಷನು ನಮ್ಮ ಕನ್ಯೆಯನ್ನು ದೇವತಾಸಾಕ್ಷಿಯಾಗಿ ಪಾಣಿಗ್ರಹಣ ಮಾಡಿಲ್ಲವೋ?

ಗ. ಕ. : ಹೌದು

ಹೆ.ಕ.:ಆದರೆ ನಮ್ಮ ವರ್ಣಾಶ್ರಮದ ಧರ್ಮಕ್ಕನುಸಾರವಾದ ಕಾರ್ಯಕ್ರಮವಾಗಿಯೂ ನಡೆದ ಈ ಪಾಣಿಗ್ರಹಣ ಸಂಸ್ಕರಣಗಳಲ್ಲಿ ಅನೇಕ ವಿಷಯಗಳಲ್ಲಿ ತಪ್ಪು ನೆಪ್ಪುಗಳು ಕುಂದು ಕೊರತೆಗಳು ಬಂದಿರಬಹುದು. ಇಂತಹ ನ್ಯೂನತೆಗಳನ್ನು ಮಹಾನುಭಾವರಾದ ಸಭಿಕರು, ಕರುಣಾಸಾಗರನಾದ ಭಗವಂತನಲ್ಲಿ ಕ್ಷಮಿಸಬೇಕೆಂದು ದೇವತಾಸಾಕ್ಷಿಯಾಗಿ ಕನ್ಯಾದಾನ ಮಾಡಿದ್ದೇವೆಯಲ್ಲವೋ?

ಗ. ಕ. : ಹೌದು

ಹೆ. ಕ. :ಸ್ತ್ರೀಯನ್ನು ಬಾಲ್ಯದಲ್ಲಿ ತಂದೆಯೂ, ಯೌವ್ವನದಲ್ಲಿ ಪತಿಯೂ, ವೃದ್ಧಾಪ್ಯದಲ್ಲಿ ಸುತರೂ ರಕ್ಷಿಸಬೇಕೆಂಬ ಲೌಕಿಕ ಧರ್ಮಕ್ಕನುಸಾರವಾಗಿ ಕನ್ಯಾದಾನ ಮಾಡಿದ್ದಾಗಿಯೂ, ನಮ್ಮ ಪೂರ್ವ ಪದ್ಧತಿ ಪ್ರಕಾರ ಹೆಣ್ಣು, ಗಂಡು ವಹಿಸಿಕೊಡುವ ಪದ್ಧತಿ ಇರುವುದಲ್ಲವೋ?

ಗ. ಕ. :ಹೌದು

ಹೆ. ಕ.:ನಿಮ್ಮ ದಿಬ್ಬಣಿಗರಲ್ಲಿ ಪ್ರಮುಖರಾದವರು ಮತ್ತು ಒಟ್ಟಾರೆ ಕುಲಸ್ಥರು ಸೇರಿ ಏನೆಂದೂ ಕುಂದು ಕೊರತೆ ಇಲ್ಲದಂತೆ ನಡೆಯಿಸಿ ಕೊಡಬೇಕೆಂಬುದು ನಮ್ಮ ಅರಿಕೆಯಾಗಿದೆ.

ನಮ್ಮ ಕನ್ನಿಕೆಯ ನೆತ್ತಿ ಎಣ್ಣೆ ಆರಲಿಲ್ಲ. ಅಂಗೈ ಗೆರೆ ಮಾಜಲಿಲ್ಲ. ಅಂಗಾಲಿಗೆ ಧೂಳು ಸೋಕಲಿಲ್ಲ. ಮೃದುವಾದ ಬಾಲ್ಯ

ಭಾಷೆಗಳಿಂದಲೂ ಆಟ ಪಾಟಗಳಿಂದಲೂ ತಂದೆ ತಾಯಿಯರ ಮನಸ್ಸನ್ನು ಸಂತೋಷಗೊಳಿಸುತ್ತಾ ಬಾಲ್ಯಾವಸ್ಥೆಯನ್ನು ಮೀರದ ನಮ್ಮ ಮುದ್ದು ಬಾಲಕಿಯನ್ನು ಯಾವ ರೀತಿ ಸಾಕುವಿರಯ್ಯಾ?

ಗ. ಕ. (ಮೌನ!)

ಹೆ. ಕ. : ನಮ್ಮ ಹೆಣ್ಣು ಮಾವನ ಗುಣವನ್ನು ಅರಿಯಳು, ಅತ್ತೆಯ ಅತಿ ಕೆಲಸವನ್ನು ತಿಳಿಯಲು, ಸಖಿಯರ ಗುಣ ದೋಷಗಳನ್ನು ಗ್ರಹಿಸಳು, ನಿರಂತರವೂ ಸೂರ್ಯನನ್ನುಬಯಸುವ ತಾವರೆಯಂತೆಯೂ, ಚಂದ್ರನನ್ನು ನೆನೆಯುವ ನೈದಿಲೆಯಂತೆಯೂ, ಕಾರ್ಮುಗಿಲನ್ನು ಬಯಸುವ ಬೆಳ್ಳಕ್ಕಿಯಂತೆಯೂ, ಮೇಘದೂತನಿಗೆ ಆಸೆಪಟ್ಟು ಮಹಾಸಾಗರದಲ್ಲಿ ತೇಲಾಡುತ್ತಿರುವ ಹಂಸದಂತೆ ಇರುವ ನಮ್ಮ ಮುದ್ದು ಬಾಲಕಿಯನ್ನು ರಕ್ಷಿಸಿಕೊಳ್ಳುವವರು ಯಾರಯ್ಯ?

ಗ. ಕ. : ವರನಯ್ಯ.

ಹೆ. ಕ. : ನಮ್ಮ ಹೆಣ್ಣ ಸೂರ್ಯದೇವನಿಗೆ ಛಾಯಾದೇವಿ ಹೇಗೊ, ಚಂದ್ರನಿಗೆ ರೋಹಿಣಿದೇವಿ ಹೇಗೊ, ವಶಿಷ್ಠನಿಗೆ ಅರುಂಧತಿ ಹೇಗೊ, ಅಧಿಸೇನನಿಗೆ ಅನುಸೂಯದೇವಿ ಹೇಗೊ, ಸತ್ಯವಂತನಿಗೆ ಸಾವಿತ್ರಿದೇವಿ ಹೇಗೊ, ಶ್ರೀರಾಮಚಂದ್ರನಿಗೆ ಸೀತಾದೇವಿ ಹೇಗೊ ಹಾಗೆಯೆ ವಸಂತನಿಗೆ ತಂಗಾಳಿ ಬೀಸಿದಂತೆ, ಮನ್ಮಥನ ಮುಂದೆ ರತಿದೇವಿ ಸೇರಿದಂತೆ ಈ ದಂಪತಿಗಳಲ್ಲಿ ಭಿನ್ನ ಭೇದ ಬಾರದಂತೆ ಹಿತೋಪದೇಶಗಳನ್ನು ಹೇಳಿ ಸರಿಪಡಿಸಿಕೊಳ್ಳುವವರು ಯಾರಯ್ಯ?

ಗ. ಕ. : ವರನ ಹಿರಿಯರು

ಹೆ. ಕ. : ನಮ್ಮ ಹೆಣ್ಣಿಗೆ ಊಟ ಮಾಡುವುದಕ್ಕೆ ಗಂಗಳವನ್ನೂ, ಕೈ ತೊಳೆಯುವುದಕ್ಕೆ ತಂಬಿಗೆಯನ್ನೂ, ಮಲಗುವುದಕ್ಕೆ ಯೋಗ್ಯಾವಾದ ರತ್ನಖಚಿತವಾದ ಮಂಚವನ್ನು, ಕರೆಯುವುದಕ್ಕೆ ಯೋಗ್ಯವಾದ ಗೋವಿನ ಹಿಂಡನ್ನೂ, ಉಡುಗೆ ತೊಡುಗೆಗಳನ್ನು ಕೊಟ್ಟುದಲ್ಲದೆ, ದ್ರವ್ಯವನ್ನು ಸಹ ಬಳುವಳಿಯಾಗಿ ಕೊಟ್ಟಿರುತ್ತೇವೆ. ಹೀಗೆ ಬಳುವಳಿಯಾಗಿ ಕೊಟ್ಟ ದ್ರವ್ಯವನ್ನು ಒಂದಕ್ಕೆ ಹತ್ತು, ಹತ್ತಕ್ಕೆ ನೂರು, ನೂರಕ್ಕೆ ಸಾವಿರಗಟ್ಟಲೆ ವೃದ್ಧಿ ಪಡಿಸಿ, ಕೊಡುವವರು ಯಾರಯ್ಯ?

ಗಂ. ಕ. : ವರನಯ್ಯ

ಹೆ. ಕ.:ಅಯ್ಯಾ ಮಹಾಶಯರೆ, ಬಾಲ್ಯಾವಸ್ಥೆಯಲ್ಲಿರುವ ನಮ್ಮ ಕನ್ನಿಕೆ ಅತ್ತೆ ಎಂಬ ಮಾತಿಗೆ ತಾಯಿ ಎಂತಲೂ, ಮಾವ ಎಂಬ ಶಬ್ದಕ್ಕೆ ತಂದೆ ಎಂತಲೂ, ಪತಿ ಎಂಬ ವಚನಕ್ಕೆ ಗತಿ ಎಂತಲೂ ತಿಳಿದಿರುವಳು. ನಾವು ಕನ್ಯಾದಾನ ಮಾಡಿದ್ದಾಗ್ಯೂ ಈ ದಂಪತಿಗಳು ಮಹಾನುಭಾವರಾದ ಸಭಿಕರ ಕರುಣ ಕಟಾಕ್ಷದಿಂದಲೂ, ದಯಾಸಾಗರನಾದ ಪರಮಾತ್ಮನ ಅನುಗ್ರಹದಿಂದಲೂ ಪುತ್ರ ಪೌತ್ರ ವಂಶಾಭಿವೃದ್ಧಿಯಾಗಿ ಬಾಳಲೆಂದು ಸರ್ವಸಂಪನ್ನ ಭಾಗ್ಯ ಸಮೃದ್ಧರಾಗಿಯೂ ಧೀರ್ಘಾಯುಷ್ಯವಂತರಾಗಿಯೂ ಬಾಳಲೆಂದು ಚಂದ್ರಶೇಖರನಾದ, ಶ್ರೀ ಅಂಬಾದರನಾದ ಬಾಲಗಂಗಾಧರನಾಥ ಪಾಲನೇತ್ರನಾದ ಶ್ರೀ ಪಾರ್ವತಿರಮಣನು ಅನುಗ್ರಹಿಸಲಿ. ಅಲ್ಲದೆ ಬೆಳಗಿನ ಜಾವದಲ್ಲಿ ಬೆಳ್ಳಕ್ಕಿಯಂತೆ ಪ್ರಕಾಶಿಸುವ ಕುಂಬಿನಿ ಕಾಂತೆಯಳಂತೆ, ಸಂಧ್ಯಾರಾಗದಂತೆ, ಬಾಲ ಸೂರ್ಯನಂತೆ ಹೊಳೆಯುವ ನವರತ್ನ ಕಿರೀಟಗಳಂತೆ ಪ್ರಜ್ವಲಿಸುವ ಉದಯ ಪರ್ವತವನ್ನು ಹೋಲುವ ಸಿದ್ಧಿ ವಿಘ್ನೇಷ್ವರನು ವರ ಸೌಭಾಗ್ಯವನ್ನು ದಯ ಪಾಲಿಸಲಿ. ಅಲ್ಲದೆ ಅಹಿಣಿ ಮಹಿಣಿಯಾದ ಮಂಗಳ ದುರ್ಘಟಿಯ ದಯೆಯಿಂದ ಈ ದಂಪತಿಗಳು ಆಯುರಾರೋಗ್ಯ ಸುಖ ಸಂಪನ್ನರಾಗಿ ಬಾಳಲೆಂದು ನಾವುಗಳೆಲ್ಲರೂ ಭಗವಂತನನ್ನು ಕುರಿತು ಪ್ರಾರ್ಥಿಸೋಣಾ.

"ಹತ್ತು ಕುಟುಂಬ ಹದಿನೆಂಟು ಗೋತ್ರ ಕುಲಸ್ಥರ ಸಭೆ ಸಮಸ್ತರ ಸಂಗಡ ಕೇಳಿ ನವ ದಂಪತಿಗಳನ್ನು ದಿಬ್ಬಣದ ಮುಖ್ಯಸ್ಥರಿಗೆ ವಹಿಸಿ ಕೊಡುವಂತೇವೇೀ........

ಸಭಿಕರೆಲ್ಲರು ಒಳ್ಳೆ ಕಾರ್ಯವಂತೇವೆ ಎಂಬ ಘೋಷಣೆ ಕೂಗುವರು

ಕಳುಹಿಸಿದವರು : ಮಹಿಳಾ ಒಕ್ಕೂಟ, ಮಡಿಕೇರಿ,

ವಿ. ಸೂ. : ಆಸಕ್ತಿಯುಳ್ಳ ಪ್ರತಿಯೊಬ್ಬ ಯುವಕ ಯುವತಿಯರು 15 ವರ್ಷ ಒಳಗಿರುವವರು ಕಲಿತು ಹೇಳುವಂತಹ ವಿಷಯ. ಮದುವೆ ಕಾರ್ಯಗಳಲ್ಲಿ ವಧುವರರನ್ನುವಹಿಸಿಕೊಟ್ಟದ್ದು ಅವಗಾಹನೆಗೆ ಬಂದರೆ ಖಂಡಿತವಾಗಿಯೂ 3 ತಿಂಗಳ ಸಂಚಿಕೆಯನ್ನು ಉಚಿತವಾಗಿ ಕೊಡಲು ಸಂಗಾತಿ ಸಂತೋಷಿಸುತ್ತದೆ.

-ಸಂಗಾತಿ

## ಕ್ರಿಕೆಟ್ ಮೈದಾನ ಮತ್ತು ಮಾನವನ ಚರಿತ್ರೆ

ವಿಶ್ವಕಪ್ ಕ್ರಿಕೆಟ್ ನಡೆದು ಅದರಲ್ಲಿ ಭಾರತ ಫೈನಲ್‌ಗೆ ತಲಪಿದ್ದು ಸಂತೋಷದ ವಿಷಯ. ಆದರೆ ಎರಡು ಟೀಮಿನಲ್ಲಿ ಯಾವುದಾದರೊಂದು ಸೋಲಬೇಕು, ಇನ್ನೊಂದು ಗೆಲ್ಲಬೇಕು. ಆದರೆ ಭಾರತವೇ ಗೆಲ್ಲುತ್ತದೆಯೆಂದು ಮೊದಲೇ ಪಂಡಿತರು ಹಾಕಿದಂತಹ ಭವಿಷ್ಯ ಲೆಕ್ಕಾಚಾರ ತಿರುಗುಮುರುಗು ಆಯಿತು. ಹಾಗೂ ನಾನಾ ಕಡೆ ದೇವಸ್ಥಾನದಲ್ಲಿ ಸಲ್ಲಿಸಿದಂತಹ ಪೂಜೆಗಳೆಲ್ಲಾ ಫಲ ನೀಡಲಿಲ್ಲ. ಜನರು ಇದಕ್ಕೆಲ್ಲಾ ಹಣ ನೀಡಿ ನಿರಾಸೆಯಾದರು. ಆದರೆ ನಮ್ಮ ದೇಶದ ಆಟಗಾರರು ಆತ್ಮ ವಿಶ್ವಾಸವಿರಿಸಿಕೊಂಡು ಆಟವಾಡಿದ್ದರೆ ಗೆಲವು ತಮ್ಮದಾಗುತ್ತಿತ್ತು. ಆತ್ಮ ವಿಶ್ವಾಸದ ಮುಂದೆ ಹಣ ಮತ್ತು ಭವಿಷ್ಯಗಳೆಲ್ಲಾ ಹಿಂದೆಯೇ ಉಳಿದಿರುತ್ತದೆ. ಇಂತಹುದು ಇನ್ನೂ ಮುಂದಕ್ಕೂ ನಡೆಯುತ್ತಲೇ ಇರುತ್ತದೆ. ಈ ಕಲಿಯುಗದಲ್ಲಿ ಆದರೆ ಮನುಷ್ಯನ ನೈಜ ಜೀವನದಲ್ಲಿ ಕ್ರಿಕೆಟ್ ಸಮರವೇ ಬೇರೆಯಾಗಿರುತ್ತದೆ. ಅದು ಈ ರೀತಿಯಿದೆ. ಅದರಲ್ಲೂ ಹನ್ನೊಂದು ಜನ ಆಟಗಾರರಿರುತ್ತಾರೆ.

| | |
|---|---|
| 1. ಪ್ರಪಂಚ ಒಂದು | ಕ್ರಿಕೆಟ್ ಮೈದಾನ |
| 2.ಪ್ರತಿ ಮಾನವರು | ಆಟಗಾರರು |
| 3.ಸೂರ್ಯ, ಚಂದ್ರ, ನಕ್ಷತಾದ್ರಿಗಳು | ಪ್ರೇಕ್ಷಕರು |

11 ನೇ ಪುಟಕ್ಕೆ

# ಪತ್ರ ವಿಭಾಗ -1

ನನ್ನ ನೆಚ್ಚಿನ ಕೊಡಗು ಸಂಗಾತಿ ಸಂಪಾದಕರಿಗೆ ಚೆ.ಗ. ಮುತ್ತಪ್ಪನ ಅನಂತ ವಂದನೆಗಳು.

ಫೆಬ್ರುವರಿ 1 ರಿಂದ 29 ರ ಸಂಗಾತಿ ಕೈ ಸೇರಿತು. ಪತ್ರ ವಿಭಾಗದಲ್ಲಿ ವೀಕ್ಷಿಸಿದೆ. ನಿರೀಕ್ಷಿಸಿದ ಫಲ ದೊರೆಯಿತು. ಜಯಂತಿ ವರ್ಧಂತಿ ವಿಷಯ ನಿಮ್ಮನ್ನು ತಿದ್ದಿದೆನೆಂದು ದಯವಿಟ್ಟು ಬೇಸರಿಸಬೇಡಿ. ನಾನು ನಿಮ್ಮಿಂದ ಕಲಿಯುವುದು ಬಹಳಷ್ಟಿದೆ. ಮನುಷ್ಯ ಸಾಯುವವರೆಗೆ ಕಲಿಯುತ್ತಲೆ ಇರಬೇಕು. ನಾನು ಅದಕ್ಕೆ ಮಾಡುತ್ತಿರುವವನು. ಇತರರಿಗೂ ಅದನ್ನೇ ಹೇಳುತ್ತಿರುವೆನು.

ನಾನು ತಾ. 4-3-2004 ರಂದು 78 ಪ್ರಾಯವನ್ನು ತಳ್ಳಿಹಾಕಿ 79 ಕ್ಕೆ ಕಾಲಿಡುತ್ತೇನೆ. ನನ್ನ ಪ್ರಾಯ ಇತರರಿಗೆ ಹೇಳುವ ಪ್ರಾಯ ಅಲ್ಲ. ಇತರರಿಂದ ಕೇಳಿಸಿಕೊಳ್ಳುವ ಪ್ರಾಯ. ಹಾಗಾಗಿ ಮಾತು ಕಡಿಮೆ ಮಾಡುತ್ತಿದ್ದೇನೆ. ಹಾಗೆಯೇ ಬರೆಯುವುದೂ, ಓದುವುದೂ ಕಡಿಮೆ ಮಾಡಿದ್ದೇನೆ. ಬಿಟ್ಟಿಲ್ಲ, ಕಲಿತ ಚಟವನ್ನು ಬೇಗನೆ ಬಿಡುವುದು ಕಷ್ಟ. ನಿಮ್ಮ ಪ್ರೇರಣೆ ಸುಮ್ಮನಿರಲು ಬಿಡುವುದಿಲ್ಲ.

ಸಂಗಾತಿ ಪುಟ 7 ಮತ್ತು 8 ರಲ್ಲಿ ನಿಮ್ಮ ವಿ. ಸೂ. ಓದಿ ಆನಂದವಾಯಿತು. ನನಗೆ ಹೆಚ್ಚು ಎಚ್ಚರವಿರಲಿ ಎಂಬ ಸಂದೇಶವಾಗಿ ನಾನು ತೆಗೆದುಕೊಂಡಿದ್ದೇನೆ. ನಿಮ್ಮ ಅನಿಸಿಕೆಗೆ ವಂದನೆ ಮತ್ತು ಧನ್ಯವಾದಗಳು. ತನ್ನ ಸ್ವಂತ ಅನುಭವ ಬರೆಯುವುದಕ್ಕೂ, ಆಲೋಚನೆ ಮಾಡಿ ಬರೆಯುವುದಕ್ಕೂ ಅಜಗಜಾಂತರ ವ್ಯತ್ಯಾಸವಿದೆ.

ನಿಮಗೂ ಕೊಡಗು ಸಂಗಾತಿ ಓದುವವರಿಗೆ ನಾನು ಚಿರ ಋಣಿ

**ಇಂತೀ ನಿಮ್ಮವ, ಚೇಂದ್ರಿಮಾಡ ಗ. ಮುತ್ತಪ್ಪ, ಕುಶಾಲನಗರ**

---

**10 ನೇ ಪುಟದಿಂದ**

| | |
|---|---|
| 4.ಅಷ್ಟದಿಕ್ಪಾಲಕರು | ಫೀಲ್ಡರ್‌ಗಳು |
| 5.ಯಮನು | ಅಂಪೈರ್ |
| 6.ಚಿತ್ರಗುಪ್ತನು | ಲೆಗ್, ಅಂಪೈರ್ |
| 7.ವೈದ್ಯನು | ಮೂರನೇ ಅಂಪೈರ್ |
| 8.ಅಗ್ನಿ | ಸ್ಪಿನ್ ಬೌಲರ್ |
| 9.ವಾಯು | ವೇಗದ ಬೌಲರ್ |
| 10.ವರುಣ | ಮಧ್ಯಮ ಬೌಲರ್ |
| 11.ವಿಧಿ | ವಿಕೆಟ್ ಕೀಪರ್ |

ಇವರೆಲ್ಲರನ್ನು ಎದುರಿಸಿ ನೂರು ವರ್ಷ ಆಯಸ್ಸನ್ನು ಪೂರ್ತಿಗೊಳಿಸಿದಾಗ ಆತನೇ ಶತಕವೀರ.

**-ತೆಕ್ಕಡೆ ಬಿ. ರಘುನಾಥ, ಮುತ್ತಾರ್ಮುಡಿ.**

# ಪತ್ರ ವಿಭಾಗ -2

ಮಾನ್ಯ ಗೌರವ ಸಂಪಾದಕರಿಗೆ ಗೌರವ ಪೂರ್ವಕ ನಮಸ್ಕಾರಗಳು. ತಮ್ಮ ಪತ್ರ ತಲುಪಿದೆ, ಧನ್ಯವಾದಗಳು, 'ಸಂಗಾತಿ' ನಿಗದಿತ ಸಮಯಕ್ಕೆ ಸರಿಯಾಗಿ ಬಂದು ಸೇರುತ್ತಿದೆ.

ತಮ್ಮ ಅನಾರೋಗ್ಯದ ವಿಷಯ ತಿಳಿದು ಬೇಸರವಾಯಿತು. ದಯಮಾಡಿ ಆರೋಗ್ಯ ಸುಧಾರಣೆಯತ್ತ ಮೊದಲು ಗಮನಹರಿಸಿ ಸಾಧ್ಯವಾದಷ್ಟು ಮಾನಸಿಕ ಒತ್ತಡವನ್ನು ಕಡಿಮೆ ಮಾಡಿಕೊಳ್ಳಲು ಪ್ರಯತ್ನಿಸಿ 'ಸಂಗಾತಿ'ಯ ಸಲುವಾಗಿ ಆರ್ಥಿಕವಾಗಿ ಮಾನಸಿಕವಾಗಿ, ದೈಹಿಕವಾಗಿ ಈಗಾಗಲೇ ಸಾಕಷ್ಟು ಬಳಲಿರುವ ತಮಗೆ ಮಾನಸಿಕ ಒತ್ತಡ ಹೆಚ್ಚಾಗುತ್ತಿರುವುದು ಸಹಜ. ಆದರೂ ತಮ್ಮ ಆರೋಗ್ಯದ ದೃಷ್ಟಿಯಿಂದ ಅದನ್ನು ಅನಿವಾರ್ಯವಾಗಿ ನಿಯಂತ್ರಿಸಿಕೊಳ್ಳಬೇಕಾಗಿದೆ.

ಜನಾಂಗ ಬಾಂಧವರ ನಡುವಿನ ಸಂಪರ್ಕ ಸೂತ್ರವಾಗಿ ಸಂಗಾತಿ ಮಹತ್ತರವಾದ ಕಾರ್ಯಗಳನ್ನು ಮಾಡುತ್ತಾ ಬರುತ್ತಿರುವುದನ್ನು ಎಲ್ಲರೂ ಗಮನಿಸಿದ್ದಾರೆ. ಪತ್ರಿಕೆಯ ಉಳಿವು ತುಂಬಾ ಅಗತ್ಯವಾದುದು ಎಂಬ ಪ್ರಜ್ಞೆ ನಮ್ಮ ಬಂಧುಗಳ ಮನದಲ್ಲಿ ಎಂದು ಮೂಡುವುದೋ! ಚಂದಾ ಮೊತ್ತವನ್ನು ಕಳುಹಿಸಿಕೊಡಲು ನಿರಂತರವಾಗಿ ಮಾಡುತ್ತಿರುವ ಮನವಿಗಳಿಗೆ ಕಿವಿಗೊಡದಿರುವುದು ದುರದೃಷ್ಟಕರವಾದುದು.

ಹಂಪಿಯಲ್ಲಿರುವ ಹನ್ನೆರಡು ಕಂಬಗಳ ಮಂಟಪದ ಚಿತ್ರ ಹಾಗೂ ಆ ಕುರಿತ ಲೇಖನ ಕಳುಹಿಸಿಕೊಡಲು ಮತ್ತೊಮ್ಮೆ ನೆನಪು ಮಾಡಿರುತ್ತೀರಿ. ತಮ್ಮ ಕೋರಿಕೆಯಂತೆ ಇದುವರೆಗೂ ಲೇಖನ ಸಿದ್ಧಪಡಿಸಲು ಸಾಧ್ಯವಾಗಿರುವುದಿಲ್ಲ. ಈ ಹಿಂದೆ ವಿಜಯ ವಿಠಲ ದೇವಸ್ಥಾನದ ಬಳಿಯಿರುವ ಮಂಟಪದ ಚಿತ್ರ ತೆಗೆದುಕೊಂಡು ಬಂದಿದ್ದೆ. ಈ ಬಗ್ಗೆ ಲೇಖನ ಸಿದ್ಧಪಡಿಸಲು ಕೆಲವು ಪುಸ್ತಕಗಳನ್ನು ಪರಿಶೀಲಿಸಿದರೂ ಯಾವುದೇ ಮಾಹಿತಿ ದೊರೆಯಲಿಲ್ಲ. ಹಂಪಿಯ ಬಗ್ಗೆ ಅಧ್ಯಯನ ನಡೆಸಿರುವ ಕೆಲವರನ್ನು ಸಂಪರ್ಕಿಸಿದರೂ, ಹೆಚ್ಚಿನ ವಿವರಗಳು ಲಭ್ಯವಾಗಲಿಲ್ಲ. ಹೀಗೆ ಖಚಿತ ಮಾಹಿತಿ ದೊರಕದಿರುವುದರಿಂದ ಲೇಖನ ಸಿದ್ಧಪಡಿಸಲು ಸಾಧ್ಯವಾಗಿರುವುದಿಲ್ಲ.

ಹನ್ನೆರಡು ಕಂಬದ ಮಂಟಪಗಳು ಹಂಪಿಯಲ್ಲಿ ಮಾರು ನಾಲ್ಕು ಕಡೆಗಳಲ್ಲಿ ಇರುವುದಾಗಿ ಮತ್ತು ಅವುಗಳಲ್ಲಿ ಇಂದಿಗೂ ಮದುವೆ ಕಾರ್ಯಗಳು ನಡೆಯುತ್ತಿರುವುದಾಗಿ ಸ್ಥಳೀಯರು ಕೆಲವರನ್ನು ವಿಚಾರಿಸಿದಾಗ ತಿಳಿದು ಬಂದಿದೆ. ಇವುಗಳ ಚಿತ್ರ ತೆಗೆದು ಆದಷ್ಟು ಬೇಗನೆ ಕಳುಹಿಸಿಕೊಡುತ್ತೇನೆ. ಲೇಖನ ಸ್ವಲ್ಪ ತಡವಾಗಬಹುದು. ದಯಮಾಡಿ ಸಹಕರಿಸಿ.

ವಂದನೆಗಳು,

**ಸಿ. ಸಿ.ಪೂವಯ್ಯ, ಹೊಸಪೇಟೆ.**

---

**ಸಂಗಾತಿ ಪತ್ರಿಕೆಯನ್ನು ಒಲೆಗೊಂದರಂತೆ ಕೊಂಡು ಓದಿ.**

---

**ಕನ್ನಡಕ್ಕಾಗಿ ಕೆಲಸ ಮಾಡುವ ಎಲ್ಲರೂ ನಮ್ಮ ಪ್ರೀತಿ ಗೌರವಗಳಿಗೆ ಪಾತ್ರರು.**

# ಕೊತ್ತಿಗೆ ಗಂಟೆ ಕಟ್ಟುದು ಯಾರ್?

ದೊಡ್ಡ ಮನೆಯ ಅಟ್ಟಲೊಂದು
ಅಜ್ಜ ಕೊತ್ತಿ ಕುದ್ದ್‌ಕಂಡ್
ಕಂಡ ಎಲಿಗಳೆಲ್ಲ ಹಿಡ್ದ್
ಕೊಂದ್ ತಿಂಬತಿತ್ತ್||

ಹೆದ್ರಿಹೋದ ಎಲಿಗ ಎಲ್ಲ
ಬದುಕವಾಸೆ ಇಟ್ಟ್‌ಕಂಡ್
ಅಡಿಗೆ ಮನೆಲಿ ಒಂದ್‌ಗೂಡಿ
ಸಭೆನ ನಡ್ಸಿದೊ||

ಸಭೆಲಿ ಮಾತ್ ಕತೆಗಳಾದೊ
ತರತರದ ಸಲಹೆ ಕೊಟ್ಟೊ
ಹೈದ ಎಲಿಯೊಂದೆದ್ದ್ ನಿತ್ತ್
ಹಿಂಗೆ ಹೇಳ್ತ್||

"ಅಜ್ಜಕೇಳಿ, ಅಣ್ಣಕೇಳಿ
ಅತ್ತೆ, ಮಾಂವ, ಬಾವ ಕೇಳಿ
ಕೊತ್ತಿ ಕುತಿಗೆಗೊಂದುಗಂಟೆ
ತಂದ್ ಕಟ್ಟನೊ||

ಕೊತ್ತಿ ಬರ್‍ಚ್ಚ ಸದ್ದ್ ಕೇಳಿ
ಎದ್ದ್ ಬಿದ್ದ್ ಹಾರಿ ಹೋಗಿ
ಮಾಳಿಯೊಳಗೆ ಅಡಂಗಿ ಕುದ್ದ್
ನಾವು ಬಾಳಕ್"||

ಸಲಹೆ ಕೇಳಿ ಎಲಿಗ ಎಲ್ಲ
"ಒಳ್ಳ ಸಲಹೆ" ತೇಳಿ ಕುಸಿಲಿ
ಎದ್ದ್ ನಿತ್ತ್ ಹಾರಿ ಕೊಣ್ದ್
ಎಲ್ಲ ಒಪ್ಪಿದೊ||

ಅಜ್ಜಿ ಎಲಿಯೊಂದೆದ್ದ್ ನಿತ್ತ್
ಪ್ರಶ್ನೆಯೊಂದು ಕೇಳೇ ಬುಡ್ತ್
"ಯಾರ್ ಹೋಗಿ ಕೊತ್ತಿಗೀಗ
ಗಂಟೆ ಕಟ್ಟುದು"?||

ಅಜ್ಜಿ ಪ್ರಶ್ನೆ ಕೇಳಿ ಎಲಿಗ
ಅತ್ತ ಇತ್ತ ನೋಡಿಕಂಡ್
ತಲೆನ ತಗ್ಸಿ ಮಾತ್ ನಿಲ್ಸಿ
ಕೊಣ್ತ ನಿಲ್ಸಿದೊ!

"ನಾನ್ ಅಜ್ಜ ನಡಿಯಕಾಲೆ
ನಾನ್ ಹೈದ ಮೊದ್ದೆಯಾತ್ಲೆ
ನನ್ನ ಮಕ್ಕ ಸಣ್ಣವೂ" ತ
ನೆವನ ಹುಡ್ಕಿದೊ||

"ನಂಗೆ ಕೈಯ್ ಬೇನೆ" ತೊಬ್ಬ
"ನಂಗೆ ದೃಷ್ಟಿ ಮಂದ" ತೊಬ್ಬ
"ನನ್ನ ಹೆಣ್ಣ್ ಬೊಸ್ರಿ' ತೊಬ್ಬ
ಹೇಳಿಕಂಡ್ ತಲೆನ ತಗ್ಸಿದೊ||

ಚರ್ಚೆ ಮಾತ್ ನಡೆಯಕನ
ಕೊಂಬ ಕೊತ್ತಿ ಹಾರಿ ಬಿದ್ದ್
ಕಾಳೆ ಎಲಿನ ಬಾಚಿ ಹಿಡ್ದ್
ಬಗ್ದ್ ಹಾಕಿತ್||

ಹೆದ್ರಿ ಹೋದ ಬಾಕಿ ಎಲಿಗ
ಚದ್‌ರಿ ಅತ್ತ ಇತ್ತ ಹಾರಿಬಿದ್ದ್
ಮಾಳಿಯೊಳಗೆ ಅಡಂಗಿ ಕುದ್ದ್
ಸಭೆನ ಮುಗ್ಸಿದೊ||

*ವಿ. ಸೂ. : ಅರೆಭಾಷೆಲಿ ಕತೆ, ಗದ್ಯ ಸಲೀಸ್ ಬರ್ದಂಗೆ ಕವನ ಕಟ್ಟ್‌ಕೆ ಪ್ರಾಸ, ಮಾತ್ರಾಗಣ ಹೊಂದ್ಸಿಕೆ ಆಗದಿರ್‌ಕನ ಕನ್ನಡ ಶಬ್ದ ಬಳಸಿಕಂಡ್ರೆ ತಪ್ಪಾಕಿಲೆ.*

- ಬಾಚರಣಿಯಂಡ ಅಪ್ಪಣ್ಣ, ಮಾಜಿ ಅಧ್ಯಕ್ಷರು,
ಕೊಡವ ಸಾಹಿತ್ಯ ಅಕಾಡೆಮಿ,

---

## *ಅನುಮಾನದ ಮಾಮ*

ನನ್ನಲ್ಲಿ ನಿನಗೆಷ್ಟು ಪ್ರೀತಿ ಚೆಂದಮಾಮ
ನಾ ಹೋದಲ್ಲಿಗೆಲ್ಲಾ ನೀ ಹಿಂದೆ ಬರುವೆ ಮಾಮ
ಮೋಡದ ನಡುವೆ ಅವಿತು ನೋಡುವೆ ಮಾಮ
ನನ್ನಲ್ಲಿ ನಿನಗೇಗೆ ಅನುಮಾನ ಮಾಮ
ನಮ್ಮಿಬ್ಬರ ನಡುವೆ ಹೇಳಲಾಗದಷ್ಟು ಅಂತರವು ಮಾಮ

## *ಸಂಗಾತಿ*

ಮಾವಿನ ಚಿಗುರಿನ ಕಂಪು
ಪ್ರಕೃತಿ ಚೆಲುವ ಹೆಚ್ಚಿಸುವುದು
ಕೋಗಿಲೆ ಗಾನದ ಇಂಪು
ಚೈತ್ರ ಮಾಸದ ಸೂಚನೆ ನೀಡುವುದು
ಕೊಡಗು ಸಂಗಾತಿಯ ನೆನಪು
ತಿಂಗಳ ಮೊದಲನೆ ದಿನ ಅರಿವು
ಕಾಯುವೆನು ಪ್ರತಿ ಮಾಸ ಮರೆಯದೆ
ಬರುವಳು ತಪ್ಪದೆ ನಮ್ಮ ಮನೆಗೆ

-ಶುಭ, ಅರಕೆರೆ

---

ಒಬ್ಬ ಜೀವಿಸುತ್ತಿದ್ದಾನೆಂದರೆ, ಅದು ಅವನು ಉತ್ತಮ ಗುರಿಯನ್ನು ಮುಟ್ಟಲು ಜೀವಿಸುವ ಜೀವನವಾಗಿರಬೇಕು.

# ಮೊಳಗುತ್ತಿದೆ ದೇಶದಲ್ಲಿ ಚುನಾವಣಾ ಕಹಳೆ ; ಪಕ್ಷಗಳ ಮೊಗದಲ್ಲೀಗ ಹೊಸ ವೇಷದ ಕಳೆ

***ರಾಜಕೀಯ ವಿಶ್ಲೇಷಣೆ :***

ದೇಶವೀಗ 14 ನೇ ಲೋಕಸಭಾ ಚುನಾವಣೆಗೆ ಸಜ್ಜುಗೊಳ್ಳುತ್ತಿದೆ. ಕರ್ನಾಟಕ ರಾಜ್ಯವೂ 12 ನೇ ವಿಧಾನಸಭಾ ಚುನಾವಣೆಯನ್ನು ಎದುರುನೋಡುತ್ತಿದೆ. ಒಂದು ಕಡೆ 'ಬರ'ದ ಸಂಕೋಲೆ. ಮತ್ತೊಂದು ಕಡೆ ಬೆಳೆದ ಬೆಳೆಗೆ ತಕ್ಕ ಬೆಲೆಯಿಲ್ಲದೆ, ದೇಶದ ರೈತರು ಕಂಗಾಲಾಗಿದ್ದಾರೆ. ಹಲವರು ಸಾಲದ ಹೊರೆ ತಾಳಲಾರದೆ ಈಗಾಗಲೇ ಆತ್ಮಹತ್ಯೆಗೆ ಶರಣಾಗಿದ್ದಾರೆ. ದೇಶದ 'ಬೆನ್ನೆಲುಬು' ರೈತ ಎಂದು ಭಾವಿಸಲಾಗಿದೆ. ಅಂದರೆ ಈಗ ದೇಶದ ಬೆನ್ನೆಲುಬು ದುರ್ಬಲಗೊಂಡಿದೆ. ಈ ಬೆನ್ನಿನ ಮೇಲೆ ಚುನಾವಣೆಯ ಗುದ್ದು ಗುದ್ದಲಾಗುತ್ತಿದೆ. ರಾಜಕೀಯ ಪಕ್ಷಗಳು ಮಾತ್ರ 'ಭಾರತ ಪ್ರಕಾಶಿಸುತ್ತಿದೆ' 'ಕರ್ನಾಟಕ ಕಂಗೊಳಿಸುತ್ತಿದೆ' ಎಂದೆಲ್ಲಾ ಬೊಬ್ಬೆ ಹಾಕಿಕೊಂಡು, ಹಿಂದೊಮ್ಮೆ ಬೆನ್ನು ತಿರುಗಿಸಿದವರ, ಹೆಗಲ ಮೇಲೆ ಕೈ ಹಾಕಿಕೊಂಡು, ಮತದಾರ ನಾಚುವಂತೆ ಸಿಕ್ಕ ಸಿಕ್ಕವರ ಜೊತೆ ಮೈತ್ರಿ ಮಾಡಿಕೊಂಡು ಚುನಾವಣೆಗೆ ಸಜ್ಜುಗೊಳ್ಳುತ್ತಿವೆ.

ಈ ರಾಜಕೀಯವೇ ಹೀಗೆ, ಇಲ್ಲಿ ಯಾರೂ ಶಾಶ್ವತ ಶತ್ರುಗಳೂ ಅಲ್ಲ, ಮಿತ್ರರೂ ಅಲ್ಲ. ಆದರೆ ಹಳ್ಳಿಗಳಲ್ಲಿ ಮಾತ್ರ ರಾಜಕೀಯ ಶಾಶ್ವತ ಶತ್ರುತ್ವವನ್ನು ಸ್ಥಾಪಿಸಿಬಿಡಬಲ್ಲದು. ಪಕ್ಷಗಳ ಮೈತ್ರಿ ಹಾಗಿರಲಿ, ಹಲವು ರಾಜಕಾರಣಿಗಳು ತಮ್ಮನ್ನು ಪೋಷಿಸಿ ಬೆಳೆಸಿದ ರಾಜಕೀಯ ಪಕ್ಷಗಳನ್ನು, ರಾಜಕೀಯ ಗುರುಗಳನ್ನೂ ಮೂಲೆಗೆ ತಳ್ಳಿ, ಅಧಿಕಾರಕ್ಕೋಸ್ಕರ, ಬಲಾಢ್ಯ ಪಕ್ಷಗಳತ್ತ ಜಿಗಿಯತೊಡಗಿದ್ದಾರೆ. ಮತ್ತೆ ಕೆಲವರು ತಮ್ಮದೇ ಆದ ಹೊಸ ಪಕ್ಷಗಳನ್ನೂ ಕಟ್ಟತೊಡಗಿದ್ದಾರೆ. ಇದೆಲ್ಲವೂ ಈಗ ನಿರಮ್ಮಳವಾಗಿ, ನಿರಾತಂಕವಾಗಿ ನಡೆಯುತ್ತಿರುವ ಘಟನಾವಳಿಗಳು. ರಾಜಕಾರಣಿಗಳಲ್ಲಿ ಯಾವ ಗೊಂದಲವೂ ಇಲ್ಲ. ಆತಂಕವೂ ಇಲ್ಲ. ಆದರೆ ನಿಜವಾದ ಗೊಂದಲವಿರುವುದು ಮತದಾರನಲ್ಲಿ ಮಾತ್ರ. ಯಾವ ಪಕ್ಷವನ್ನು ಬೆಂಬಲಿಸುವುದು ಯಾರನ್ನೂ ನಂಬುವುದು? ತನಗೆ ಯಾರು ಹಿತವರು ಈ ಹಲವರೊಳಗೆ? ಎಂಬ ಮತದಾರನ ಪ್ರಶ್ನೆಗೆ ಉತ್ತರ ಸಿಗುವುದು ಸ್ವಲ್ಪ ಕಷ್ಟವೆ.

ದೇಶದಲ್ಲೀಗ ರಾಜಕೀಯ ಧ್ರುವೀಕರಣಗೊಳ್ಳುತ್ತಿದೆ. ಹೆಚ್ಚು ಕಡಿಮೆ ಬಿ. ಜೆ. ಪಿ. ನೇತೃತ್ವದ ಎನ್. ಡಿ. ಎ. ಮತ್ತು ಕಾಂಗ್ರೆಸ್ ನೇತೃತ್ವದ ಜಾತ್ಯಾತೀಯ ಒಕ್ಕೂಟಗಳ ನಡುವೆ ಲೋಕಸಭಾ ಚುನಾವಣೆಯಲ್ಲಿ ನೇರ ಹಣಾಹಣಿ ನಡೆಯಲಿವೆ. ಈಗಾಗಲೇ ನಡೆದಿರುವ ಸಮೀಕ್ಷೆಗಳ ಪ್ರಕಾರ ಎನ್. ಡಿ. ಎ. ಲೋಕಸಭೆಯಲ್ಲಿ ಪ್ರಚಂಡ ಬಹುಮತ ಪಡೆಯುವ ಸಾಧ್ಯತೆ ಇದೆ.

ವಾಜಿಪೇಯಿ ನೇತೃತ್ವದ ಕೇಂದ್ರ ಸರ್ಕಾರ ಕಳೆದೈದು ವರ್ಷಗಳಲ್ಲಿ ನಡೆಸಿದ ಆಡಳಿತ ಜನರ ಮೆಚ್ಚುಗೆಗೆ ಪಾತ್ರವಾಗಿದೆ. ಮುಖ್ಯವಾಗಿ ಭಾರತ ಅಂತರರಾಷ್ಟ್ರೀಯ ಕ್ಷೇತ್ರದಲ್ಲಿ ಗಣನೀಯ ಸಾಧನೆಯನ್ನು ಸಾಬೀತುಪಡಿಸುವ ಮೂಲಕ ಭಾರತೀಯರನ್ನು ಆತ್ಮಾಭಿಮಾನವನ್ನು ಮೂಡಿಸುವಲ್ಲಿ ಸಫಲವಾಗಿದೆ. ಸಂಪರ್ಕ ಕ್ಷೇತ್ರ ಹಾಗೂ ರಸ್ತೆ ಅಭಿವೃದ್ಧಿಯಲ್ಲೂ ಗಮನಾರ್ಹ ಸಾಧನೆಗೈದಿದೆ. ತನ್ನ ನೌಕರರಿಗೆ ಶೇ. 50 ರಷ್ಟು ತುಟ್ಟಿಭತ್ಯೆ ನೀಡಿ ಅವರನ್ನೂ ತೃಪ್ತಿಪಡಿಸಿದೆ. ಆದರೆ ರೈತ ಸಮುದಾಯಕ್ಕೆ ಮಾತ್ರ ಈ ಸರಕಾರದ ಕೊಡುಗೆ ನಗಣ್ಯ. ' ಗ್ರಾಮೀಣ ಭಾಗದ ರೈತರು ಹಾಗೂ ಮಹಿಳೆಯರ ಸ್ಥಿತಿ ಅಧೋಗತಿಯತ್ತ ಸಾಗಿದೆ. ಇವರ ಏಳಿಗೆಗೆ ಕೇಂದ್ರ ಸರಕಾರ ಕಿಂಚಿತ್ತೂ ಗಮನ ಕೊಡಲಿಲ್ಲ ಎಂದು ಸೋನಿಯಾಗಾಂಧಿ ಕೇಂದ್ರ ಸರಕಾರವನ್ನು ಟೀಕಿಸುವುದರಲ್ಲಿ ಖಂಡಿತಾ ಅರ್ಥವಿದೆ. ಸ್ವತಃ ಉಪಪ್ರಧಾನಿ ಎಲ್. ಕೆ. ಅಡ್ವಾನಿಯವರೇ ಭಾರತ ಪ್ರಕಾಶಿಸುತ್ತಿದ್ದರೂ ರೈತರ ಬದುಕು ಪ್ರಕಾಶಿಸುತ್ತಿಲ್ಲ ಎಂದು ಆತಂಕ ವ್ಯಕ್ತಪಡಿಸುವ ಮೂಲಕ ಸತ್ಯವನ್ನು ಒಪ್ಪಿಕೊಂಡಿದ್ದಾರೆ. ಇಡೀ ದೇಶದ ರೈತ ಸಮುದಾಯವೇನಾದರೂ ಬಿ. ಜೆ. ಪಿ. ವಿರುದ್ಧ ತಿರುಗಿ ಬಿದ್ದರೆ ಆಗ ಮಾತ್ರ ಕಾಂಗ್ರೆಸ್ ಹಾದಿ ಸುಗಮನಾಗಬಹುದು. ಆದರೆ ಸದ್ಯಕ್ಕೆ ದೇಶದಲ್ಲಿ ಬಿ. ಜೆ. ಪಿ. ಅಲೆಯಿರುವುದರಿಂದ, ಹಲವಾರು ಚಿತ್ರ ನಟ, ನಟಿಯರಲ್ಲದೆ ರಾಜಕೀಯ ಘಟಾನುಘಟಿಗಳು ಬಿ. ಜೆ. ಪಿ.ಯತ್ತ ದಾಪುಗಾಲಿಡುತ್ತಿದ್ದಾರೆ.

ಇತ್ತ ಕರ್ನಾಟಕದಲ್ಲಿ ಕಾಂಗ್ರೆಸ್ ಬಿ. ಜೆ. ಪಿ. ಜಾತ್ಯಾತೀತ ಜನತಾದಳಗಳ ನಡುವೆ ತ್ರಿಕೋನ ಸ್ಪರ್ಧೆ ಏರ್ಪಡುವ ಸಾಧ್ಯತೆಗಳು ನಿಚ್ಚಳವಾಗತೊಡಗಿದೆ. ಕೆಲವು ತಿಂಗಳುಗಳ ಹಿಂದೆ ಜನತಾ ಪರಿವಾರ ಒಗ್ಗೂಡಿದರೆ, ಅಧಿಕಾರ ಅದರ ಮನೆ ಬಾಗಿಲಿಗೆ ಹುಡುಕಿಕೊಂಡು ಬರುವ ಸನ್ನಿವೇಶವಿತ್ತು. ಆದರೆ ಈಗ ಚಿತ್ರಣ ಬದಲಾಗಿದೆ. ಜನತಾ ಪರಿವಾರವೂ ಒಂದುಗೂಡಲಿಲ್ಲ. ಅಧಿಕಾರವು ಅದರ ಕಡೆಗೆ ಮುಖ ಮಾಡುತ್ತಲೂ ಇಲ್ಲ. ಒಂದು ಕಡೆ ಬೊಮ್ಮಾಯಿ ನೇತೃತ್ವದ ಎ. ಐ. ಪಿ. ಜೆ. ಡಿ., ವಿಜಯಮಲ್ಯರ ಜನತಾ ಪಕ್ಷದ ಜೊತೆ ಹೊಂದಾಣಿಕೆ ಮಾಡಿಕೊಂಡರೆ, ಜಾತ್ಯಾತೀತ ಜನತಾದಳ, ಶ್ರೀನಿವಾಸ ಪ್ರಸಾದರ ಸಮತಾಪಕ್ಷದ ಜೊತೆ ಹೊಂದಾಣಿಕೆ ಮಾಡಿಕೊಂಡಿದೆ. ಕೊನೆಯ ಕ್ಷಣದಲ್ಲಿ ತೃತೀಯ ಶಕ್ತಿಗಳೆಲ್ಲ ಪರಸ್ಪರ ಒಂದುಗೂಡಿದರೆ ನಿಶ್ಚಿತವಾಗಿ ಜಯದ ಹಾದಿಯತ್ತ ಮುನ್ನಡೆಯಬಹುದು. ಕನ್ನಡನಾಡು ಪ್ರಾದೇಶಿಕ ಪಕ್ಷವೂ ಕೆಲವು ಕ್ಷೇತ್ರಗಳಲ್ಲಿ ನಿರ್ಣಾಯಕ ಪಾತ್ರ ವಹಿಸಬಹುದು. ಕಾಂಗ್ರೆಸ್ ಪಕ್ಷವು ಕೃಷ್ಣ ಸರಕಾರ ಮಾಡಿದ ಸಾಧನೆಯನ್ನು ನೆಚ್ಚಿಕೊಂಡಿದೆ. ಅಕ್ಷರ ದಾಸೋಹ, ಸ್ತ್ರೀಶಕ್ತಿ ಸ್ವಸಹಾಯ ಗಳಂತಹ ಉತ್ತಮ ಯೋಜನೆಗಳನ್ನು ಸರಕಾರಿ ಜಾರಿಗೆ ತಂದಿದೆ. ಆದರೆ ಗ್ರಾಮೀಣ ಭಾಗದ ಜನತೆಗೆ ಕೃಷ್ಣ ಸರಕಾರದ ಬಗ್ಗೆ ತೃಪ್ತಿ ಕಡಿಮೆ ಇದೆ. ಅನಂತಕುಮಾರರವರ ನೇತೃತ್ವದಲ್ಲಿ ಬಿ. ಜೆ. ಪಿ. ಕರ್ನಾಟಕದಲ್ಲಿ ಗಮನಾರ್ಹವಾಗಿ ಚೇತರಿಸಿಕೊಳ್ಳುತ್ತಿದೆ. ಆದರೆ ಎಲ್ಲ ಪಕ್ಷಗಳಲ್ಲೂ ಭಿನ್ನಾಭಿಪ್ರಾಯ, ಒಳಜಗಳಗಳು ಚುನಾವಣೆಯ ಜೊತೆ ಜೊತೆಯಲ್ಲೇ ತಾರಕಕ್ಕೇರುತ್ತಿವೆ. ರಾಜಕೀಯ ಪಕ್ಷಗಳ ವಾದ ವಿವಾದ ಏನೇ ಇರಲಿ ತೀರ್ಪು ನೀಡುವ ಪರಮೋಚ್ಚ ಅಧಿಕಾರ ಈಗ ಮತದಾರನ ಕೈಯಲ್ಲಿದೆ. ಅವರೆ ನಿರ್ಧರಿಸಬೇಕೀಗ.

-ಪಟ್ಟಡ ಶಿವಕುಮಾರ್.

ಒಬ್ಬ ಗ್ರಂಥಕಾರನ ದೋಷಗಳನ್ನು ವಿಮರ್ಶಿಸುವುದು ಸುಲಭ. ಆದರೆ ಗುಣಗಳನ್ನು ಪ್ರಶಂಸಿಸುವುದು ಬಹು ಕಠಿಣ.

# ದಿನಾಂಕ 26-1-2004 ರಂದು 55 ನೇ ಗಣರಾಜ್ಯೋತ್ಸವದಂದು ರಾಜ್ಯಪಾಲರಿಂದ ಪ್ರತಿಷ್ಠಿತ ದ್ವಿತೀಯ ಬಹುಮಾನವನ್ನು ಸ್ವೀಕರಿಸುತ್ತಿರುವ ಕೋಣನ ಕುಂಟೆ ಸರ್ಕಾರಿ ಮಾದರಿ ಶಾಲೆಯ ಮಕ್ಕಳೊಂದಿಗೆ ನೃತ್ಯ ನಿರ್ದೇಶಕ ಅಮ್ಮಾಜೀರ ಪೊನ್ನಪ್ಪ ಮತ್ತು ಮುಖ್ಯೋಪಾಧ್ಯಾಯ ಯಂ. ಕೆ. ಗೌಡರು.



ದಿನಾಂಕ 26-1-2004 ರಂದು ನಡೆದ 55 ನೇ ಗಣರಾಜ್ಯೋತ್ಸವ ಸ. ಮಾ ಶಾಲೆ ಕೋಣನ ಕುಂಟೆಗೆ ಒಂದು ಸುದಿನ. ಕನಸಲ್ಲೂ ನೆನಸದ ಸರ್ಕಾರಿ ಶಾಲೆಯ ಮಕ್ಕಳು ಮಾಣಿಕ್ ಷಾ ಫೇರೆಡ್ ಮೈದಾನದಲ್ಲಿ ನಡೆದ ವರ್ಣರಂಜಿತ ಗಣರಾಜ್ಯೋತ್ಸವದಲ್ಲಿ "ಸುಗ್ಗಿ ಸುವ್ವಾಲೆ ಕುಣಿತ" ಎಂಬ ಕೋಲಾಟ ನೃತ್ಯವನ್ನು ಪ್ರದರ್ಶಿಸಿ ವಿಶ್ವದಾದ್ಯಂತ ದೂರದರ್ಶನದಲ್ಲಿ ವೀಕ್ಷಕರ ಮನಸ್ಸನ್ನು ತಣಿಸಿರುವುದು ಹೆಮ್ಮೆಯ ವಿಷಯ. ಎಲ್ಲರ ಮೆಚ್ಚುಗೆಗೆ ಪಾತ್ರರಾದ ರಾಜ್ಯಪಾಲರಿಂದ ಪ್ರತಿಷ್ಠಿತ ದ್ವಿತೀಯ ಬಹುಮಾನವನ್ನು ಗಳಿಸಿ ಹೆಮ್ಮೆಯಿಂದ ಮೆರೆದಾಡಿದರು.

04-02-2004 ರಂದು ಬೆಂಗಳೂರಿನ ಕೆ. ಜಿ. ರಸ್ತೆ ಕಾವೇರಿ ಭವನದ ಎದುರು 12 ಕೋಟಿಯಿಂದ ನಿರ್ಮಿಸಲಾದ "ಶಿಕ್ಷಕರ ಸದನ" ಉದ್ಘಾಟನೆ ಮಾನ್ಯ ಮುಖ್ಯಮಂತ್ರಿಯವರಿಂದ. ಅದೇ ಸಂದರ್ಭದಲ್ಲಿ ಕೋಣನ ಕುಂಟೆ ಶಾಲಾ ಮಕ್ಕಳಿಂದ "ಜ್ಯೋತಿಯ ಬೆಳಗೋಣ ಚಿಣ್ಣರ ಅಂಗಳ ಕಟ್ಟೋಣ" ನೃತ್ಯ ಪ್ರದರ್ಶನವಾಯಿತು. ಈ ಹೆಗ್ಗಳಿಕೆಗೆ ಶಾಲೆಯ ಮು. ಶಿಕ್ಷಕರಾದ ಶ್ರೀ ಎಂ. ಕೆ. ಗೌಡರು ನೃತ್ಯ ಮತ್ತ ನಿರ್ದೇಶಕರಾದ ಅಮ್ಮಾಜೀರ ಪೊನ್ನಪ್ಪನವರು ಕಾರಣಕರ್ತರೆಂದರೆ ತಪ್ಪಾಗಲಾರದು. ಹಾಗೂ ಸಹ ಶಿಕ್ಷಕಿಯರಾದ ಪಿ. ಎಸ್. ನಾಗರತ್ನ ಎನ್. ಎಸ್ ಪುಷ್ಪಾವತಿ ಮತ್ತು ಪಿ. ಎ. ರಮಾಪ್ರಭಾ ಇವರ ನಿತ್ಯ ತರಬೇತಿಯೇ ಕಾರಣವಾಗಿರುತ್ತದೆ.

ಮತ್ತೆ 2004 ಜೂನ್ 10 ರಂದು ದೆಹಲಿಯಲ್ಲಿ ನಡೆಯುವ ಒಲಂಪಿಕ್ ಗೇಮ್ಸ್ ಉದ್ಘಾಟನೆಯಂದು ಇದೇ ಸಾಂಸ್ಕೃತಿಕ ಕಾರ್ಯಕ್ರಮ ನೀಡಲು ಈ ತಂಡವನ್ನು ಆಹ್ವಾನಿಸಿರುವುದು ಮೇಲ್ಕಂಡ ಶಾಲಾ ಮಕ್ಕಳ ಪ್ರತಿಭೆಗೆ ಮೆರಗು ನೀಡಿದಂತಿದೆ.

- ಯಂ. ಕೆ. ಗೌಡ, ಬೆಂಗಳೂರು.

## ಅಯೋಧ್ಯೆ ಐತಿಹಾಸಿಕ ಮಂದಿರದ ಕುರುಹುಗಳು

ಉತ್ತರ ಪ್ರದೇಶದ ಲಕ್ನೋ ಉಚ್ಚ ನ್ಯಾಯಾಲಯದ ನಿರ್ದೇಶನದ ಮೇರೆಗೆ ಶ್ರೀ ರಾಮ ಜನ್ಮಭೂಮಿ ಅಯೋಧ್ಯೆಯಲ್ಲಿ ಪ್ರಾಚ್ಯವಸ್ತು ಸಂಶೋಧನಾಲಯ ನಡೆಸಿದ ಉತ್ಖನ್ನದ ವೇಳೆ ಅಲ್ಲಿ ಹತ್ತನೆ ಶತಮಾನಕ್ಕೆ ಮುಂಚಿತವಾಗಿ ಇದ್ದ ಭವ್ಯ ದೇಗುಲದ ಕುರುಹುಗಳು ಪತ್ತೆಯಾಗಿವೆ.

ಈ ಅಂಶವನ್ನು ದಾಖಲೆಗಳ ಸಹಿತ ಐತಿಹಾಸಿಕ ಸತ್ಯ ಸಂಗತಿಯೊಂದಿಗೆ, ಉತ್ಖನ್ನದ ತಂಡವು ನ್ಯಾಯಾಲಯಕ್ಕೆ ವರದಿ ಸಲ್ಲಿಸಿದೆ. ಆ ಪ್ರಕಾರ ಶ್ರೀ ರಾಮನ ಜನ್ಮ ಸ್ಥಳದಲ್ಲಿ ಪ್ರಸಕ್ತ ಇರುವ ತಾತ್ಕಾಲಿಕ ಮಂದಿರದ ಪಶ್ಚಿಮ ಭಾಗದಲ್ಲಿ ಉತ್ಖನ್ನದ ವೇಳೆ ಲಭಿಸಿದ ಐತಿಹಾಸಿಕ ಮಂದಿರದ ಚಿತ್ರಣವನ್ನು ನೀಡಲಾಗಿದೆ.

ಶ್ರೀರಾಮ ದೇಗುಲವನ್ನು ನೆಲಸಮಗೊಳಿಸಿ, ವಿದ್ರೋಹಿ ಧಾಳಿಕಾರರು ಅಟ್ಟಹಾಸ ಗೈದಿದ್ದಕ್ಕೆ ಇದಕ್ಕಿಂತ ಹೆಚ್ಚಿನ ನಿದರ್ಶನ ಬೇಕೆ? ಇನ್ನು ಕೆಲವು ಸ್ಥಳಗಳಲ್ಲಿ ಮೇಲ್ಭಾಗ ಗೋಪುರಗಳಿದ್ದರೆ, ಕೆಳ ಭಾಗದ ಅಡಿಪಾಯ ಇತ್ಯಾದಿ ದೇವಸ್ಥಾನದ ಮಾದರಿಯಲ್ಲಿದ್ದು ಹಲವಾರು ಸಂಶಯಗಳಿಗೆ ದಾರಿ ಮಾಡಿಕೊಡುವಂತವು. ದೆಹಲಿಯ ಕುತುಬ್ ಮೀನಾರ್ ಸಹ ಇದಕ್ಕೆ ಹೊರತಲ್ಲ ಅನ್ನುವ ವಿಚಾರವನ್ನು ಅಲ್ಲಿಯ ನಿವಾಸಿಗಳು ತಿಳಿಸುತ್ತಾರೆ. ಪರಕೀಯರ ಧಾಳಿಯ ಸಂದರ್ಭದಲ್ಲಿ 30 ಸಾವಿರ ದೇವಸ್ಥಾನಗಳು ನಾಶವಾಗಿವೆಯೆಂಬುದಾಗಿ ಅಂದಾಜಿಸಲಾಗಿದೆ.

ಮುಖ ಪುಟದ ಬರಹಕ್ಕೆ ಸಂಬಂಧಿಸಿದೆ

**- ಸಂಗಾತಿ**

**18 ನೇ ಪುಟದಿಂದ**

ಕ್ಲರ್ಕ್ i) SSLC / ತತ್ಸಮಾನ ii) ಇಂಗ್ಲೀಷ್ ಟೈಪಿಂಗ್ (30 wpm)/ ಹಿಂದಿ ಟೈಪಿಂಗ್ (25 wpm)ವಯೋಮಿತಿ : 18-27 ವರ್ಷ, ಸ್ಟೋರ್ ಕೀಪರ್, i) SSLC ಆಗಿರಬೇಕು, ಒಂದು ವರ್ಷದ ಕೆಲಸದ ಅನುಭವ ಇದ್ದವರಿಗೆ ಆದ್ಯತೆ. ವರೋಮಿತಿ : 18-27 ವರ್ಷ ದರ್ವಾನ್ i) 8 ನೇ ತರಗತಿ ಪಾಸಾಗಿರಬೇಕು. ii) ಕನಿಷ್ಟ 165 cm ಎತ್ತರ, 45 kg ತೂಕ, 77-82 cm ಎದೆ ಹೊಂದಿರಬೇಕು. ವಯೋಮಿತಿ :20-27 ವರ್ಷ, ವಯೋಮಿತಿಯನ್ನು ಮಾರ್ಚ್ 13, 2004 ರ ಆಧಾರದಲ್ಲಿ ಗಣನೆಗೆ ತೆಗೆದುಕೊಳ್ಳಲಾಗುವುದು. ಅರ್ಜಿಯ ಕವರ್‌ನ ಮೇಲೆ "Application for the post of................" ಎಂದು ಬರೆಯಬೇಕು. ಒಂದಕ್ಕಿಂತ ಹೆಚ್ಚಿನ ಅರ್ಜಿ ಸಲ್ಲಿಸುವುದಾದಲ್ಲಿ ಪ್ರತ್ಯೇಕ ಅರ್ಜಿ ಸಲ್ಲಿಸಬೇಕು. ದರ್ವಾನ್ ಹೊರತುಪಡಿಸಿ ಉಳಿದ ಹುದ್ದೆಗಳಿಗೆ ಸ್ತ್ರೀಯರೂ ಸಹ ಅರ್ಜಿ ಸಲ್ಲಿಸಬಹುದು. ಅರ್ಜಿಯಲ್ಲಿ ಸೂಚಿಸಿದ ಸ್ಥಳದಲ್ಲಿ ಅಭ್ಯರ್ಥಿಯ ಪೋಟೋ ಅಂಟಿಸಿ ಗೆಜೆಟೆಡ್ ಆಫೀಸರರಿಂದ ಧೃಢೀಕರಿಸಿ ಕೊಳ್ಳಬೇಕು. ಅಂತಹುದೇ ಇನ್ನೊಂದು ಪೋಟೋದ ಹಿಂಬದಿಯಲ್ಲಿ ಸಹಿ ಹಾಕಿ ಸಣ್ಣ ಕವರ್‌ನಲ್ಲಿ ಇಟ್ಟು ಅರ್ಜಿಯ ಜೊತೆ ಸಲ್ಲಿಸಬೇಕು. ತುಂಬಿಸಿದ ಅರ್ಜಿಯ ಜೊತೆಯಲ್ಲಿ ಅಗತ್ಯವಿರುವ ಪ್ರಮಾಣ ಪತ್ರಗಳ (ಪ್ರಾಯ, ಅರ್ಹತೆ, ಜಾತಿ , ಮೆಡಿಕಲ್ (ದರ್ವಾನ್ ಹುದ್ದೆಗೆ ಇತ್ಯಾದಿ) ಧೃಢೀಕೃತ ಪ್ರತೀಗಳನ್ನು ಸಲ್ಲಿಸಬೇಕು. SC/ST/OBC ಅಭ್ಯರ್ಥಿಗಳಿಗೆ ಹಾಗೂ ExSM ಮತ್ತು ಸರಕಾರಿ ಉದ್ಯೋಗಿಗಳಿಗೆ ಗರಿಷ್ಠ ವಯೋಮಿತಿಯಲ್ಲಿ ಸೂಕ್ತ ಸಡಿಲಿಕೆ ಇರುವುದು. ಆಯ್ಕೆಗೆ ಇಂಟರ್‌ವ್ಯೂ ಸ್ಕಿಲ್ ಟೆಸ್ಟ್ ಫಿಸಿಕಲ್ ಟೆಸ್ಟ್ ಇತ್ಯಾದಿಗಳ ಆಧಾರದಲ್ಲಿ ನಡೆಯುವುದು ತುಂಬಿಸಿದ ಅರ್ಜಿ ಸಲ್ಲಿಕೆಗೆ ಕೊನೆಯ ದಿನಾಂಕ : **15-03-2004 ವಿಳಾಸ : Post Bag No. 3, Khadki Post Office, Pune - 411003**

ಪ್ರೀತಿ, ಸಹನೆಗಳಿಂದ ಕ್ರೌರ್ಯವನ್ನು ಗೆಲ್ಲುವುದೆ ನಾಗರಿಕತೆಯ ಲಕ್ಷಣ.

# ಮೈಸೂರಿನಲ್ಲಿ ಕೊಡಗು ಗೌಡ ಮಹಿಳಾ ಒಕ್ಕೂಟದವರಿಂದ ರಾಷ್ಟ್ರಕವಿ ಕುವೆಂಪುರವರ ಜನ್ಮ ಶತಮಾನೋತ್ಸವ ಆಚರಣೆ

ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲಾ ಗೌಡ ಮಹಿಳಾ ಸಂಘಟನೆಯ ವತಿಯಿಂದ ರಾಷ್ಟ್ರಕವಿ ಕುವೆಂಪುರವರ ಜನ್ಮಶತಮಾನೋತ್ಸವವನ್ನು ಮೈಸೂರಿನ ಕೊಡಗು ಗೌಡ ವಿದ್ಯಾ ಸಂಘದಲ್ಲಿ ದಿನಾಂಕ 2-2-2004 ರಂದು ಸಡಗರದಿಂದ ಆಚರಿಸಲಾಯಿತು.

ಕಾರ್ಯಕ್ರಮದ ಮೊದಲಿಗೆ ಕುವೆಂಪು ಸ್ಮರಣಾರ್ಥ ಸಪೋಟ ಹಣ್ಣಿನ ಗಿಡಗಳನ್ನು ಮಾಜಿ ಅಧ್ಯಕ್ಷೆ ಶ್ರೀಮತಿ ದಂಬೆಕೋಡಿ ಭಾಗೀರಥಿ ಹಾಗೂ ಹಿರಿಯರಾದ ಉಳುವಾರನ ಲಲಿತಾ ಮಾದಯ್ಯ ಅವರ ಅಮೃತ ಹಸ್ತದಿಂದ ನೆಡಿಸಲಾಯಿತು. ಇದಾದ ನಂತರ ಆಟೋಟ ಸ್ಪರ್ಧೆಗಳನ್ನು ಮತ್ತು ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಪ್ರಾರಂಭಿಸಲಾಯಿತು.

ಆಟೋಟ ಸ್ಪರ್ಧೆಯಲ್ಲಿ ವಿಜೇತರಾದವರ ಹೆಸರುಗಳು ಈ ರೀತಿ ಇದೆ.

**1. ನಿಂಬೆಹಣ್ಣು ಮತ್ತು ಚಮಚ:**

ಮೊದಲ ಬಹುಮಾನ ಶ್ರೀಮತಿ ನಾಟೋಳನ ಸೀತಮ್ಮ ಶ್ರೀಧರ
ಎರಡನೇ ಬಹುಮಾನ ಉಳುವಾರನ ಜಯಶ್ರೀ
ಮೂರನೇ ಬಹುಮಾನ ಕುಂಟುಪುಣಿ ಶೀಲಾ ರಮೇಶ್
ನಾಲ್ಕು ಮೂಲೆಗಳ ಆಟ ಶ್ರೀಮತಿ ದಂಬೆಕೋಡಿ ಮನು ಭರತ
ಶ್ರೀಮತಿ ಚೆರಿಯಮನೆ ಚಂದ್ರಕಲಾ
ಶ್ರೀಮತಿ ದೇವರಗುಂಡ ಹೇಮಾವತಿ
ಚೆಂಡು ತಳ್ಳುವಾಟ ಶ್ರೀಮತಿ ಕಡ್ಯದ ಶ್ಯಾಮಲ
ಶ್ರೀಮತಿ ಕೂಡಕಂಡಿ ಲಲಿತಾ ಸೋಮಣ್ಣ
ಶ್ರೀಮತಿ ದೇವರಗುಂಡ ಹೇಮಾವತಿ
ಕುವೆಂಪು ಕುರಿತು ಭಾವಗೀತೆ ಮತ್ತು ರಸಪ್ರಶ್ನೆ ಸ್ಪರ್ಧೆಗಳು:
ಭಾವಗೀತೆ : ಶ್ರೀಮತಿ ದೇವಜನ ಗೀತಾ ಗಣೇಶ್, ಶ್ರೀಮತಿ ಮಾವಂಜೀರ ರಶ್ಮಿ, ಶ್ರೀಮತಿ ಕಡ್ಯದ ವಿನುತ, ರವಿ
ರಸಪ್ರಶ್ನೆ : ಶ್ರೀಮತಿ ದೇವರಗುಂಡ ಹೇಮಾವತಿ
ಕು॥ ಪಟ್ಟಡ ನೀಶಾ ಪ್ರಭಾಕರ, ಶ್ರೀಮತಿ ಕಡ್ಯದ ವಿನುತ ರವಿ
ವಧ್ಮವೇಶ:ಶ್ರೀಮತಿ ಕೂಡಕಂಡಿ ಲಲಿತಾ ಸೋಮಣ್ಣ, ಶ್ರೀಮತಿ ವಸಂತ ಪಳಂಗಪ್ಪ, ಶ್ರೀಮತಿ ಕಡ್ಯದ ವಿನುತ ರವಿ

ಈ ಮೇಲಿನ ಕಾರ್ಯಕ್ರಮಗಳಿಗೆ ಶ್ರೀಮತಿ ಕಡ್ಯದ ಸರೋಜ ಭೀಮಯ್ಯ, ಶ್ರೀಮತಿ ಕೊಂಬಾರನ ರೋಹಿಣಿ ಮತ್ತು ಶ್ರೀಮತಿ ಉಳುವಾರನ ಮಮತಾ ಕಿರಣರವರು ತೀರ್ಪುಗಾರ ರಾಗಿದ್ದರು. ಮಧ್ಯಾಹ್ನದ ಊಟದ ವ್ಯವಸ್ಥೆಯನ್ನು ಸಂಘದ ಕಾರ್ಯಕಾರಿ ಸಮಿತಿ ಸದಸ್ಯರುಗಳು ವ್ಯವಸ್ಥೆ ಮಾಡಿದ್ದರು.

ಊಟದ ನಂತರ ಕು॥ ಕತ್ರಿಕೊಲ್ಲಿ ಪ್ರಿನ್ಸಿ ವಸಂತ್ ಕುಮಾರ್‌ರ ಪ್ರಾರ್ಥನೆಯೊಂದಿಗೆ ಸಭಾರಂಭವನ್ನು ಪ್ರಾರಂಭಿಸಲಾಯಿತು. ಕೂಡಲಿಂಗನ ತಿಲಕ ಮೇದಪ್ಪ ಸ್ವಾಗತಿಸಿದರು. ಶ್ರೀಮತಿ ಬಾಳಾಡಿ ಲಕ್ಷ್ಮಿ ಉತ್ತಯ್ಯನವರು ಸಂಘದ ಚಟುವಟಿಕೆ ಕುರಿತು ವರದಿಯನ್ನು ಮಂಡಿಸಿದರು.

ಶ್ರೀಮತಿ ದಂಬೆಕೋಡಿ ಭಾಗೀರಥಿಯವರು ಹಿತ ವಚನಗಳನ್ನು ನೀಡಿ ಸಂಘದ ಬೆಳವಣಿಗೆಯ ಬಗ್ಗೆ ತಿಳಿ ಹೇಳಿದರು. ಅಧ್ಯಕ್ಷರಾದ ಶ್ರೀಮತಿ ಕೂಡಕಂಡಿ ಲಲಿತಾ ಸೋಮಣ್ಣನವರು ರಾಷ್ಟ್ರಕವಿ ಕುವೆಂಪು ಕುರಿತು ಮಾತನಾಡಿದರು.

ಕುವೆಂಪು ರಚಿತ ಹಾಡುಗಳನ್ನು ಹಾಡಿದ ಮಕ್ಕಳೆಲ್ಲರಿಗೂ ಬಹುಮಾನ ನೀಡಲಾಯಿತು.

ಸ್ಪರ್ಧೆಗಳಲ್ಲಿ ಗೆದ್ದವರಿಗೆ ಬಹುಮಾನ ಖರೀದಿಸಲು ಶ್ರೀಮತಿ ಉಳುವಾರನ ಘನು ಚಂದ್ರಶೇಖರ್, ಶ್ರೀಮತಿ ಕಾನಡ್ಕ ಗಾಯಿತ್ರಿ ಪದ್ಮಾಜೀ, ಶ್ರೀಮತಿ ಹಿರೇಬಂಡಾಡಿ ದಮಯಂತಿ ಆನಂದಗೌಡ ಮತ್ತು ಚೆರಿಯಮನೆ ಯಶೋಧ ರಾಮಚಂದ್ರ ಧನ ಸಹಾಯ ಮಾಡಿರುತ್ತಾರೆ. ಶ್ರೀಮತಿ ಕುಯ್ಯಮುಡಿ ಮೀನಾ ಚಂಗಪ್ಪ ವಂದಿಸಿದರು. ರಾಷ್ಟ್ರಗೀತೆಯೊಂದಿಗೆ ಕಾರ್ಯಕ್ರಮ ವನ್ನು ಮುಕ್ತಾಯ ಗೊಳಿಸ ಲಾಯಿತು.

**- ನಿಶಾ, ಪಟ್ಟಡ**

---

## ಶುಭ ವಿವಾಹ

1. ಮಂಡ್ಯ ನಿವಾಸಿ, ಕಾಳೇರಮ್ಮನ ದಿ॥ ಗಣಪತಿ ಮತ್ತು ಭಾಗೀರಥಿ ದಂಪತಿಗಳ ಪುತ್ರಿ ಮೀರಾ (B.E., (E&C) ಮತ್ತು ಸಂಪಾಜೆಯ ಕಳಮೆಮನೆ ಕೃಷ್ಣಪ್ಪಗೌಡರ ಪುತ್ರ ಕೆ. ಕೆ. ಸುಕುಮಾರ್‌ಗೌಡ (B.E., (Mech) ಇವರ ವಿವಾಹವು ದಿನಾಂಕ 14-12-2003 ರ ಭಾನುವಾರ ಮಡಿಕೇರಿ ಮೇಲಿನ ಗೌಡ ಸಮಾಜದಲ್ಲಿ ಬಾರಿ ವಿಜೃಂಭಣೆಯಿಂದ ನೆರವೇರಿತು.

2. ಮಂಡ್ಯ ನಿವಾಸಿ ನಿವೃತ್ತ ಪೊಲೀಸ್ ಇನ್ಸ್‌ಪೆಕ್ಟರ್, ದಂಬೆಕೋಡಿ ಚೆಟ್ಟಿಯಪ್ಪನವರ ಪುತ್ರ ಭವಾನಿಶಂಕರ್ ಮತ್ತು ತಾವೂರು ಗ್ರಾಮದ ನಿವೃತ್ತ ಫಾರೆಸ್ಟರ್ ಎಳ್ಮೆಕಾಲು ವೆಂಕಟರಮಣರವರ ಪುತ್ರಿ ಪುಷ್ಪಾವತಿ ಇವರ ವಿವಾಹವು ದಿನಾಂಕ 15-2-2004 ರ ಭಾನುವಾರ ಭಾಗಮಂಡಲ ಗೌಡ ಸಮಾಜದಲ್ಲಿ ಭಾರೀ ಅದ್ದೂರಿಯಾಗಿ ನೆರವೇರಿತು.

3. ಮಂಡ್ಯ ನಿವಾಸಿ ಚೊಂಡೀರ ಮೊಣ್ಣಪ್ಪನವರ ಮಗಳು ಬಬಿತಾ ಮತ್ತು ಕುಶಾಲನಗರ ನಿವಾಸಿ ಕಾನೆಹಿತ್ಲು ನಂಜಪ್ಪನವರ ಮಗ ಪ್ರಸನ್ನ (ಪುಟ್ಟು) ಇವರ ವಿವಾಹವು ದಿನಾಂಕ 29-4-2004 ರ ಭಾನುವಾರ ಕುಶಾಲನಗರದ ಕಾಳೇಘಟ್ ಕಲ್ಯಾಣ ಮಂಟಪದಲ್ಲಿ ಬಹು ಅದ್ದೂರಿಯಿಂದಲೂ ಸಾಂಗವಾಗಿಯೂ ನೆರವೇರಿತು.

**- ಸಂಗಾತಿ**

---

## ಮುರಾರಿ

ನಾಳೆ ಬನ್ನೆಂತ
ಹೇಳ್ತ್ ಮುರಾರಿ,
ಎರಡ್ ಮನೆಲಿ
ಮಾರಾ ಮುರಿ,
ಅಂವ ಮಾರ್ನೆ
ದಿನ ಪರಾರಿ,

---

ಪ್ರತಿಯೊಂದು ವಸ್ತುವು ಕೂಡ ಅದರಷ್ಟಕ್ಕೆ ದೊಡ್ಡದೂ ಮಹತ್ವದ್ದೂ ಆಗಿರುತ್ತದೆ.

## ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ ಮಡಿಕೇರಿ, ಕನ್ನಡೋತ್ಸವ ಸಮಿತಿ ಸಂಪಾಜೆ ಮತ್ತು ಜೈಹಿಂದ್ ಯುವಕ ಮಂಡಲ ಕೊಯನಾಡು, ಮಡಿಕೇರಿ ತಾಲ್ಲೂಕು, ಕೊಡಗು.

ಇವುಗಳ ಜಂಟಿ ಆಶ್ರಯದಲ್ಲಿ ಕನ್ನಡೋತ್ಸವ ಹಾಗೂ ಕುವೆಂಪುರವರ ಶತಮಾನೋತ್ಸವ ಸಮಾರಂಭವು ದಿನಾಂಕ 14-2-2004 ಶನಿವಾರ ಶ್ರೀ ಗಣೇಶ ಕಲಾಮಂದಿರ ಕೊಯನಾಡಿನಲ್ಲಿ ನಡೆಯಿತು. ಬೆಳಿಗ್ಗೆ 10 ಘಂಟೆಗೆ ಪಿ. ಡಿ. ವಿಶ್ವನಾಥರಿಂದ ಧ್ವಜಾರೋಹಣದ ನಂತರ ತಾಲೂಕು ಕನ್ನಡ ಪರಿಷತ್ತಿನ ಅಧ್ಯಕ್ಷರಾದ ಕೋಡಿ ಕುಶಾಲಪ್ಪಗೌಡರಿಂದ ಉದ್ಘಾಟನೆಯಾಯಿತು. ನಂತರ ಯನ್. ಎಸ್. ದೇವಿ ಪ್ರಸಾದರ ಅಧ್ಯಕ್ಷತೆಯಲ್ಲಿ ಬಿ. ಎ. ಸಂಶುದ್ದೀನ್ ಹಾಗೂ ಬಾಲಕೃಷ್ಣ ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು.

ಕುರುಂಜಿ ಗಂಗಾಧರ, ಪ್ರಾಂಶುಪಾಲರು, ಜೂನಿಯರ್ ಕಾಲೇಜು ಅರಂತೋಡು ಇವರ ಅಧ್ಯಕ್ಷತೆಯಲ್ಲಿ ನಡೆಯಿತು. 11 ಘಂಟೆಗೆ ವಿಷಯ ಮಂಡನೆ -ಕನ್ನಡ ಸಾಹಿತ್ಯ ಲೋಕಕ್ಕೆ ಕುವೆಂಪುರವರ ಕೊಡುಗೆ - ಡಾ. ಎನ್. ಎ. ಕರುಣಾಕರ ಉಪನ್ಯಾಸಕರು, ಮಂಗಳೂರು ವಿಶ್ವ ವಿದ್ಯಾಲಯ ಇವರು ವಂದಿಸಿದರು. ಮಧ್ಯಾಹ್ನ ಸೊಗಸಾದ ಊಟದ ವ್ಯವಸ್ಥೆಯ ನಂತರ ವಿದ್ಯಾರ್ಥಿಗಳಿಗೆ ಕವಿಗೋಷ್ಠಿ, ಯುವಕ ಯುವತಿ ಮಂಡಳಿಗಳಿಗೆ ರಸಪ್ರಶ್ನೆ ಕಾರ್ಯಕ್ರಮ ಮತ್ತು ಭಾವಗೀತೆ ಸ್ಪರ್ಧೆಯು ಮಂಡಲಕ್ಕೆ ಒಳಪಟ್ಟಂತೆ ನಡೆಯಿತು.

ಸಂಜೆ ನಡೆದ ಸಮಾರೋಪ ಸಮಾರಂಭದಲ್ಲಿ ತಾಲ್ಲೂಕು ಸಾಹಿತ್ಯ ಪರಿಷತ್ ಅಧ್ಯಕ್ಷರಾದ ಟಿ. ಪಿ. ರಮೇಶರವರ ಅಧ್ಯಕ್ಷತೆಯಲ್ಲಿ ಶ್ರೀ ಸೀತಾರಾಮ ಕೇವಳ ಪ್ರಾಂಶುಪಾಲರು ಶಾರದಾ ಹೆಮ್ಮಾಳ ವಿದ್ಯಾಲಯ, ಸುಳ್ಯ ಇವರು ಸಮಾರೋಪ ಭಾಷಣ ಮಾಡಿದರು. ಸಭೆಯಲ್ಲಿ ಮುಖ್ಯ ಅತಿಥಿಗಳಾಗಿ ಬಿ.ಯಂ. ಮಾಧವಗೌಡ, ಮೊಯಿದಿನ್ ಕುಂಞ, ಮೀನಕುಮಾರಿ, ಮಹಮ್ಮದ್ ಕುಂಞ ಹಾಜರಿದ್ದು ನಂತರ ಸಾಂಸ್ಕೃತಿಕ ಕಾರ್ಯಕ್ರಮವನ್ನು ಯುವಕ ಮಂಡಳಿಗಳಿಂದ ನಡೆಯಿತು.

- ಬೈತಡ್ಕ ಜಾನಕಿ ಬೆಳ್ಯಪ್ಪ. ಮಡಿಕೇರಿ.

---

20 ನೇ ಪುಟದಿಂದ

ಈ ರೀತಿ ಹೆಚ್ಚಿನ ಜನ ಹೇಳ್‌ಕಾಕನ ಧೃತರಾಷ್ಟ್ರನ ಮನ್‌ಸ್ ಸ್ವಲ್ಪ ಅಲ್ಲಾಡಿಕೆ ಶುರ್ ಆತ್. ಹಂಗಾಗಿ ಅವ ಮಕ್ಕಳ ಮಾತಿಗೆ ಒಪ್ಪಿತ್. ಮಂತ್ರಿ ವಾರಣವತದ ಪ್ರಕೃತಿ ಪೊರ್ಲುನ ಹೊಗುಳಿಕೆ ಶುರು ಮಾಡ್ದೊ. ಪಾಂಡವು ಅಲ್ಲಿಗೆ ಹೋಗುವ ವರ್ತಮಾನ ಕೇಳಿ ಅದೂ ಅಲ್ಲದೆ ಅರ್ವ ಹೆಸರ್‌ಲ್ಲಿ ಒಂದು ದೊಡ್ಡ ಔತಣನ ಮಾಡಿಕೆ ಏರ್ಪಾಡ್ ಮಾಡ್ದೊ. ಧೃತರಾಷ್ಟ್ರ ಪಾಂಡವುಕೆ ಈ ಸಂಗತಿನ ಹೇಳ್ರೆ ಅವು ಬೇಗ ಒಪ್ಪಿವೆ. ಅಲ್ಲದೆ ವಾರಣವತಲಿ ಒಂದು ಹಬ್ಬದ ಸಡಗರ ಮಾಡಿ ಅಲ್ಲಿನ ಜನನೂ ಸಹ ಪಾಂಡವು ಬಾದರ ಕೇಳಿ ಕುಷಿ ಪಟ್ಟ್. ಪಾಂಡವರೊಟ್ಟಿಗೆ ಬೇರೆ ದೊಡ್ಡವು ಸಹ ಹೊರಟೊ.

ಧುರ್ಯೋದನ, ಕರ್ಣ ಮತ್ತೆ ಶಕುನಿ ಮೂರು ಜನ ಸೇರಿ ಕುಂತಿನ ಅವ್ವ ಮಕ್ಕಳ ಕೊಲ್ಲಿಗೆ ಪಿಕಲಾಟ ನಡ್ಸಿದೊ. ಇವೆಲ್ಲ ಸೇರಿ ಪುರೋದರನ ವಾರಣವತಿಗೆ ಮುಂದೇ ಕಳ್ಸಿ ಗುಟ್ಟಾಗಿ ಅಲ್ಲಿ ಏನೇನ್ ಮಾಡಕುತ ಹೇಳಿದ್ದವೆ. ಪಾಂಡವರ ವಾಸಕ್ಕಾಗಿ ಬಾಳಾ ಲಾಯಿಕದ ಅರಮನೆ ತಯಾರಾತ್. ಈ ಅರಮನೆ ಬೆಂಕಿ ಉರಿಯಕ್ಕೆ ಬೇಕಾದ ಗೋಣಿನಾರ್, ಅರ್‌ಗು, ತುಪ್ಪ ಎಣ್ಣೆ ಮತ್ತೆ ಕೊಬ್ಬು ಮಿಶ್ರದ ವಸ್ತುಗ ತಂದ ಕಟ್ಟಿದ್ದೊ. ಅದೂ ಅಲ್ಲದೆ ಅರಮನೆ ಅಲ್ಲಲ್ಲಿ ಲಾಯಿಕ ಒಣಗಿದ ವಸ್ತುಗಳ ಇಟ್ಟಿದ್ದೊ. ಬೇಗ ಬೇಗ ಬೆಂಕಿ ಉರಿಯಕ್ಕಾಗಿ ಅರ್‌ಗ್‌ನ ಅರಮನೆಲಿ ಪಾಂಡವುಕೆ ಉಳಿಯಕೆ ಎಲ್ಲಾ ತರದ ಸಲಕರಣೆನ ಮಾಡಿದ್ದೊ. ಅವುಕೆ ಕೂರುವ ಆಸನ ಮಲ್‌ಗಿಕೆ ಕಟ್ಟ್‌ಲ್ ಮುಂತಾದ ವಾಸ ಮಾಡಿಕೆ ಲಾಯ್ಕಾದ ಎಲ್ಲಾ ರೀತಿಯ ಸಲಕರಣೆ ಮಾಡಿಟ್ಟ್. ಪಟ್ಟಣಲಿ ನಡ್‌ಸುವ ಜೀವನದ ಹಂಗೆ ಯಾವ ತೊಂದರೆ ಇಲ್ಲದೆ ಇರ್‌ಕೆ ಅರಗ್‌ನ ಅರಮನೆ ತಯಾರಾಗುವವರೆಗೆ ಇರ್‌ಕೆ ಏರ್ಪಾಡ್ ಮಾಡಿ ಅರಮನೆ ತಯಾರಾದ ಮೇಲೆ ಅರಮನೆಗೆ ಹೋದೊ. ಈ ತರದ ಏರ್ಪಾಡ್ ಪಾಂಡವು ರಾತ್ರೆ ಮಲ್ಗಿರ್‌ಕನ ಅರ್‌ಗ್‌ನ ಅರಮನೆಗೆ ಬೆಂಕಿ ಕೊಡುವ ಏರ್ಪಾಡ್ ಆ ಅರಮನೆಗೆ ಬಾಕಾಕನ ಪಾಂಡವರ್ನ ಬಾಳಾ ಪ್ರೀತಿ ವಿಶ್ವಾಸಂದ ಕಂಡ್ ಸತ್ಕರಿಸಿದೊ. ಯಾಕ್ಹೇಳ್ರೆ ಪಾಂಡವರ್ನ ಕೌರವರೇ ಕೊಂದದ್‌ತ ಯಾರೂ ಗ್ಯಾನ ಮಾಡ್ವಾಗದ್. ಬೆಂಕಿ ಆಕಸ್ಮತಾಗಿ ತಾಗಿ ಹೊತ್ತಿಕಂಡ್ ಆಗಲಿಂತ ಅಭಿಪ್ರಾಯ ಬರಲಿತ ಮಾಡ್ದೊ.

-ಪೂಜಾರಿ ಮೊಣ್ಣಪ್ಪ, ಮುಂದುವರ್ದದೆ.

---

### ಬೀಡಿ

ಎಲೆಯಲಿ ಮಾಡಿದ ಬೀಡಿ
ಸೇದಿ ಹೊಗೆಯ ಬಿಡಬೇಡಿ।
ಕಾಗದ ಸುತ್ತಿದ ಸೊಪ್ಪು
ಎದೆಯಲಿ ತುಂಬುವುದು ಕಪ್ಪು।
ಪ್ರೇಯಸಿ ಕೊಡುವ ಸ್ಥಾನ
ಮಾಡುವುದು ಯಮನ ಧ್ಯಾನ।
ಧೂಮಪಾನದಿಂದ ನೀ ದೂರವಿರು
ಚಿತ್ರ ಹಿಂಸೆ ನೀ ಪಡದಿರು।

-ಶುಭ ಅರಕೆರೆ

---

ಜೀವಂತವಾಗಿರುವುದಕ್ಕೆ ತೃಪ್ತಿ ಹೊಂದದೆ, ಜೀವಿತವನ್ನು ಜೀವನದಂತೆ ಜೀವಿಸಿ ತೋರಿಸಿ.

*ಬಾಲ ಸಂಗಾತಿ ವಿಭಾಗ : ಜ್ಞಾನ -18*

**ಶಾಲೇಲಿ ಹೇಳಿಕೊಟ್ಟಿದ್ದೆಲ್ಲಾ ನಿಜ ಅಲ್ಲಾ**

***ಮಹಾಭಾರತದಲ್ಲಿ ರುವ ವೈಜ್ಞಾನಿಕ ಅಂಶ -2***

"ಸೂರ್ಯ ಕಿರಣಗ ಒಂದ್ ಕಡೆ ಸೇರಕನ ಅಗ್ನಿ ಉತ್ಪನ್ನ ಆದೆತೇಳುವ ಅಂಶ ಮಹಾ ಭಾರತಲಿ ಉಲ್ಲೇಖಿತ ಆದದ್ದ್ ಸ್ಪಷ್ಟ ಆದೆ.

"ಯತಾದಿತ್ಯನ್ಮಹೋಶ್ಚಾಪಿ ವಿರೋಧಶ್ಚೈವ ಪಾವಕಃ

ಜಾಯನ್ತೇವಂ ಸಮುದಯಾತ್ ಕಲಾನಾಮಿವ ಜನ್ತವಃ

ಈ ಶ್ಲೋಕಲಿ ಮಣಿ ಸೂರ್ಯ ಕಿರಣಗಳ್ನ ಗ್ರಹಿಸಿದೆತೇಳುದನ್ನ ವಿವರಿಸಲಾವುಟು. ಈ ಉದಾಹರಣೆಗಳ್ಂದ ಹಿಂದೆ ಭಾರತಲಿ ಗಾಜಿಂದ ಲೆನ್ಸ ತಯಾರ್ಸುವ ತಂತ್ರಜ್ಞಾನ ಬಳಕೆಲಿ ಇತ್ತ್‌ತ ಸ್ಪಷ್ಟ ಆಗಿ ಗೊತ್ತಾದೆ. ಚುಂಬಕನ ವಿಷಯನೂ ಮಹಾಭಾರತಲಿ ವಿವಸ್ಯೊಳೊ.

ಅಭಿದ್ರವತ್ಮಯಸ್ಕಾಂತಮಯೋ ನಿಶ್ಚೇತನಂ ಯಥಾ।

ಸ್ವಭಾವಹೇತುಜಾ ಭಾವಾ ಯದ್ವದನ್ಯದಪೀದ್ಧಶಮ್॥

ಇಲ್ಲಿ ತಟಸ್ಥ ಆಗಿರುವ ಲೋಹನೂ ಚುಂಬಕದ ಅಕಷ್ಟ ಆದೆತೇಳುವ ಅಂಶ ನಿರೂಪಿತ ಆಗ್ಯುಟು. ಸುಶ್ರುತ ಶರೀರಲಿ ಹುದುಗಿರುವ ಕಬ್ಬಿಣದ ಅಂಶನ ಹೊರಗೆ ತೆಗೆಯಕೆ ಚುಂಬಕನ ಉಪಯೋಗಿಸಕ್‌ತ ತಿಳಿಸಿಟು. ಕೌಟಿಲ್ಯನ ಅರ್ಥ ಶಾಸ್ತ್ರಲಿನೂ ಚುಂಬಕದ ಉಲ್ಲೇಖ ಉಟ್ಟು. ಮತ್ಸ್ಯಯಂತ್ರಲೂ ಚುಂಬಕನ ಉಪಯೋಗಿಸಿದ್ದಾಗಿ ಕೆಲವು ಅಭಿಪ್ರಾಯಪಟ್ಟವೆ.

ಏವಮುಕ್ತ್ವಾ ಜಹಾಸೋಚ್ಚೈ ಕೇಶನ ಪರವೀರ ತಸ್ಯ ಸಂಸ್ಮಯತಃ ಶಾರೇ ವಿಧ್ಯುದೂಪಾ ಮಹಾತ್ಮನ

ಅಂಗುಷ್ಠ ಮಾತ್ರಾ ತ್ರಿದಶಾಃ ಮುಮುಚುಃ ಪಾವಕಾರ್ಚಿಷಃ

ಈ ಶ್ಲೋಕಲಿ ಕೃಷ್ಣನ ಶರೀರಂದ ವಿದ್ಯುತ್ ಕಣಗ ಹೊರಸೂಸ್‌ತಿತ್‌ತ ಉಲ್ಲೇಖಿಸಲಾಗ್ಯುಟ್ಟು. ಟೆರಿಲೀನ್ ಅಥವಾ ನೈಲಾನ್ ಬಟ್ಟೆ ತೆಗೆಕಾಕನ ಕೆಲವೊಮ್ಮೆ ಚಟಚಟತ ಶಬ್ದ ಬಂದು ನಮಿಗೆಲ್ಲಾ ಗೊತ್ತೇ ಉಟ್ಟು. ಇದ್ಕೆ ವಿದ್ಯುತ್ ಕಣಂಗಳೇ ಕಾರಣ. ರೇಷ್ಮೆ ಬಟ್ಟೆಂದ ವಿದ್ಯುತ್ ಬಂದದೆತ ನಮ್ಮ ಪೂರ್ವಿಕರ್ ಹಿಂದೆನೇ ತಿಳ್‌ದಿದ್ದೊ. ಶ್ರೀಕೃಷ್ಣ ಪೀತಾಂಬರ ದರಂತೇಳ್ವು ಲೋಕವಿಧಿತ. ಆದ್ದರಿಂದ ಆತನ ಶರೀರಂದ (ಬಟ್ಟೆಂದ) ವಿದ್ಯುತ್ ಕಣಂಗ ಹೊರಸೂಸಿದೆತ ವರ್ಣಿಸಿದ್ದ್ ಉಚಿತನೇ ಆಗ್ಯುಟ್ಟು. ಹಿಂಗೆ ಭೌತ ಶಾಸ್ತ್ರಕ್ಕೆ ಸಂಬಂಧಿಸಿದ ಹಲವಾರ್ ವಿಷಯಗ ಮಹಾಭಾರತಲಿ ಉಟ್ಟು.

- ಮುಂದುವರ್ದದೆ.

*ಬಾಲ ಸಂಗಾತಿ ವಿಭಾಗ : ಕಥೆ-18*

## ಚತುರ ಕಕ್ಕೆ (ಕಾಗೆ)

ಬಾಳ ಹಿಂದೆ ಒಮ್ಮೆ ಒಂದು ಕಕ್ಕೆಗೆ ಮಾಸದ ತುಂಡು ಸಿಕ್ಕಿತ್ತ್. ಅದರ್ನ ಮರದ ಮೇಲೆ ಕುದ್ದ್‌ಕಂಡ್ ತಿಂಬಕ್ಕುತ್ತೇಳ್‌ಕಾಕನ ಠಕ್ಕನರಿ (ಕುದ್‌ಕ) ಬಂದ್ ಕಕ್ಕೆನ ನಿನ್ನ ಧ್ವನಿ ಎಷ್ಟ್ ಮಧುರ ನಿನ್ನ ಗರಿಗ ಎಷ್ಟ್ ಚೆಂದತ ಹೊಗಳಿ ನೀನ್ ಈಗ ಒಂದು ಹಾಡ್ ಹೇಳ್‌ತ್ತೇಳ್ ಕಾಕನ ಉಬ್ಬಿಹೋದ ಈ ಕಕ್ಕೆ ಕಾಕಾತೇಳುದರೊಳ್ಗೇ ಮಾಸದ ತುಂಡ್ ನರಿನ ಬಾಯೊಳ್ಗೆ ಬಿದ್ದದೆ. ತಕ್ಷಣ ನರಿ ಪಲಾಯನ ಮಾಡ್ಕನೇ ಈ ಕಕ್ಕೆಗೆ ಗೊತ್ತಾದ್ದ್ ನರಿ ನಂಗೆ ಮೋಸ ಮಾಡ್ದ್‌ತ. ಅಂದ್‌ದ ಅದ್ ಹೆಂಗಾರ್ ಮಾಡಿ ಈ ನರಿಮೇಲೆ ಸೇಡ್ ತೀರ್ಸಿಕಣೋಕುತ ಹೊಂಚು ಹಾಕ್‌ತಿತ್ತ್.

ಒಂದು ದಿನ ಕಕ್ಕೆ ಪೇಟೆಕಡೆ ಹಾರಿಕಂಡ್ ಹೋದೆ. ಆಗ ಒಂದು ಅಂಗಡಿಲಿ ಮಾರಿಕೆತ ಇಟ್ಟಿದ್ದ ಒಂದು ಕುಂಡತ (ಅಳಿಲು) ಗೊಂಬೆನ ನೋಡ್ದೆ. ಅದ್ ಕುಂಡತನ ಚರ್ಮದೊಳಗೆ ಉಮ್ಮಿ ತುಂಬಿಸಿ ಹೊಲ್ದ್ ಮಾಡ್ದ ಗೊಂಬೆ. ಅದರ್ನ ನೋಡಿದ ತಕ್ಷಣ ಕಕ್ಕೆ ಬುದ್ಧಿ ಚುರ್‌ಕಾತ್. ಅದ್ ಅತ್ತ ಇತ್ತ ಹಾರಾಡಿ ಮೆಲ್ಲೆ ಆ ಗೊಂಬೆನ ಕಚ್ಚಿಕಂಡ್ ಅಂಗಡಿಯಂವ ಹಾಹಾತೇಳಿಕಂಡಿದ್ದಂಗೆ ಹಾರಿ ಹೋತ್. ಕಕ್ಕೆ ಆ ಗೊಂಬೆನ ತಂದ್ ತನ್ನ ಗೂಡ್ ಇರುವಲ್ಲಿ ಒಂದು ಕೊಂಬೆ ಸಂದ್‌ಲಿ ಮಡ್‌ಗಿತ್.

ಒಂದು ದಿನ ಇದ್ದಕಿದ್ದಂಗೆ ದೂರಲಿ ಆ ಠಕ್ಕ ನರಿ ಬಾಯಿಲಿ ಮಾಸದ ಒಂದು ದಪ್ಪ ತುಂಡ್‌ನ ಕಚ್ಚಿಕಡ್ ಓಡ್‌ತಿತ್ತ್. ಕಕ್ಕೆ ಇದೆ ಸಮಯತ್ತೇಳಿ ಕುಂಡತ ಗೊಂಬೆನ ಕಚ್ಚಿಕಂಡ್ ಆ ನರಿಗೆ ಕಾಣುವಂಗೆ ಹಾರಿಬಾತ್. ನರಿಗೆ ಕಕ್ಕೆ ಹತ್ರ ಇರುವ ಇಡೀ ಅಳಿಲುನ ಕಂಡ್ ಆಸೆ ಆಗಿ ಬಾಯಿಲಿ ನೀರ್ ಬಾತ್. ಕಕ್ಕೆ ಹಾರಿಕಂಡ್ ಬಾಕಾಕನ ನರಿನ ಹತ್ರ ಅಕಸ್ಮಾತ್ ಬಿದ್ದಂಗೆ ಕುಂಡತನ ಬೀಳ್ಸಿತ್. ನರಿ ಖುಷಿಲಿ ತಕ್ಷಣ ಮಾಂಸದ ತುಂಡ್‌ನ ಬುಟ್ಟ್ ಕುಂಡತನ ಕಚ್ಚಿಕಂಡ್ ಓಡಿಹೋದೆ. ಒಂದು ಪೊದೆಯೊಳ್ಗೆ ನುಗ್ಗಿ ಇನ್ನೆನ್ ತಿನ್ನಕುತ ಬಾಯಿ ಹಾಕಿದೆ. ಒಣ್‌ಗಿ ಗಟ್ಟಿಯಾದ ಚರ್ಮ ಕಲ್ಲ್‌ನಂಗೆ ನರಿನ ಹಲ್ಲಿಗೆ ಬೇನೆ ಆದೆ. ಆಗ ನರಿಗೆ ಅದ್ ಕುಂಡತದ ಒಣಗಿದ ಚರ್ಮದೊಲ್ಗೆ ಉಮ್ಮಿ ತುಂಬಿಸಿ ಮಾಡ್ದ ಗೊಂಬೆತ ಗೊತ್ತಾಗಿ ಪೆಚ್ಚಾದೆ. ತಾನ್ ಮಾಸದ ತುಂಡು ಬೀಳ್ಸಿದಲ್ಲಿಗೆ ಬಂದ್ ನೋಡಕನ ಕಕ್ಕೆ ಅಲ್ಲೆ ಮರದ ಮೇಲೆ ಕುದ್ದ್‌ಕಂಡ್ ಕೊಡ್‌ಪಿ ಕೊಡ್‌ಪಿ ತಿಂಬತಿತ್ತ್. ನರಿ ಬಾಯಿಲಿ ನೀರ್ ತುಂಬಿಸಿ ಕಂಡ್ ಕಾಲಬದ್‌ಲಾಗೋತ್. ನನ್ನ ಹಳೇ ಬೇಳೆ ಬೇಯಕಿಲೆತ ಗ್ಯಾನ ಮಾಡ್ತ್. ಈ ಕಕ್ಕೆ ನನಗಿಂತ ಬುದ್ಧಿವಂತ ತೇಳಿಕಂಡ್ ವಾಪಾಸ್ಸು ಹೋತ್.

-ಬಿಟ್ಟೀರ ಚೊಂದಮ್ಮ, ಶಂಭು ಮುಂದುವರ್ದದೆ

## ಶಿಕ್ಷೆ

*ಒಮ್ಮೆ ನ್ಯಾಯಾಧೀಶರ್ ತನ್ನ ಮುಂದೆ ಕಟ್ಟೇಲಿ ನಿಂತ ತಪ್ಪಿತಸ್ಥನ ಕಣ್ಣ್‌ಟ್ಟ್ ನೋಡ್ಕನ ಅವು ತಮ್ಮ ಹಳೆ ಮಾಸ್ಟರ್‌ತೇಳಿ ಗೊತ್ತಾತ್. ಆಗ ಅಂವ ಪಟ್ಟನೇ ಹೇಳ್ತ್. ಸಾರ್ ನಾನ್ ಈ ಹೊತ್ತಿಗಾಗಿ ಎಷ್ಟ್ ವರ್ಷಂದ ಕಾದಿದ್ದೆ ಗೊತ್ತಾ? ಈಗ ನಾನ್ ಹೇಳುವಂತ ಈ ತಪ್ಪ್‌ನ ಇನ್ನೆಂದಿಗೂ ಮಾಡ್ದುಲೇತ ಒಂದು ಸಾವಿರ ಸಲ ಬರೆಯೋಕುತ" ಅದೇ ನಾನ್ ನೀವ್ಗೆ ಕೊಡೊ ಶಿಕ್ಷೆತ ಹೇಳ್ತ್.*

*-ಚಂಡೀರ ರೇಖಾ ಗಣೇಶ್, ಕೋಕೇರಿ.*

ವೃದ್ಧರು ಎಲ್ಲದಕ್ಕೂ ಹೆದರುತ್ತಾರೆ, ಭಗವಂತನನ್ನು ಹೊರತು ಪಡಿಸಿ.

# ಗೌಡ ಗ್ರಾಮ ಸಮಿತಿ ಸ್ಥಾಪನೆ, ಕೊಪ್ಪ.

ದಿನಾಂಕ 15-02-2004 ನೇ ಭಾನುವಾರದ ಶುಭ ದಿನದಂದು 11 ಘಂಟೆಗೆ ಸರಿಯಾಗಿ ಕೊಪ್ಪ ಗ್ರಾಮದ ಮತ್ತು ಆಸುಪಾಸಿನ ಗ್ರಾಮದ ಹತ್ತು ಕುಟುಂಬ ಹದಿನೆಂಟು ಗೋತ್ರಕ್ಕೆ ಸೇರಿದ ಗೌಡ ಸರ್ವ ಬಳಗದವರ ಸಭೆಯನ್ನು ಕೊಪ್ಪ ಗ್ರಾಮದ ಚಿಯಂಡಿ ದೇವಯ್ಯ (ರಾಜು) ಮತ್ತು ಶ್ರೀಮತಿ ಶಾಂತಿಯವರ ಮನೆಯಲ್ಲಿ ನಡೆಸಲಾಯಿತು.

ಸಭೆಯ ಅಧ್ಯಕ್ಷತೆಯನ್ನು ಕುಂಞೂಳಿ ತಿಲಕರವರು ವಹಿಸಿ ಸ್ವಾಗತ ಕೋರಿದರು. ನಂತರ ಸಭೆಯಲ್ಲಿ ಸ್ಥೂಲವಾಗಿ ಚರ್ಚಿಸಲಾಯಿತು. ಶ್ರೀ ಕಾನೆಹಿತ್ಲು ದಿನೇಶ್‌ಕುಮಾರ್‌ರವರನ್ನು ಕಾರ್ಯದರ್ಶಿಯಾಗಿಯೂ, ಖಜಾಂಚಿಯಾಗಿ ಚಿಯಂಡಿರ ದೇವಯ್ಯ (ರಾಜು) ರವರನ್ನು, ಶ್ರೀಮತಿ ಶಾಂತಿಯವರನ್ನು ಸಂಘಟನೆ ಸಂಚಾಲಕಿಯಾಗಿಯೂ, ಶ್ರೀಮತಿ ಪೊನ್ನೆಟ್ಟಿ ಅಕ್ಕಮ್ಮ ಕುಟ್ಟಪ್ಪರವರನ್ನು ಗೌರವ ಸಲಹೆಗಾರರಾಗಿಯೂ ಆರಿಸಲಾಯಿತು.

ಅನಂತರ ಚರ್ಚಿಸಿ ಈ ಕೆಳಗಿನ ಅಭಿಪ್ರಾಯವನ್ನು ಅಧ್ಯಕ್ಷರು ನೀಡಿದರು. ಮೊದಲನೆಯದಾಗಿ ಮುಂದಿನ ಸಭೆಯಲ್ಲಿಗೆ ಸುತ್ತಮುತ್ತಲಿನ ಗ್ರಾಮದ ಗೌಡ ಬಂಧುಗಳನ್ನು ಸೇರಿಸಿ, ಆ ಸಭೆಯಲ್ಲಿ ಬೈಲಾ ಇತ್ಯಾದಿಗಳನ್ನು ಅಳವಡಿಸುವಂತೆ ಮತ್ತು ಸಭೆಯಲ್ಲಿ ಮುಖ್ಯವಾದ ವಿಷಯವನ್ನು ಚರ್ಚಿಸಿ ಮುಂದಿನ ಅವಧಿಗೆ ನೂತನ ಕಾರ್ಯಕಾರಿ ಮಂಡಳಿಯನ್ನು ಆಯ್ಕೆ ಮಾಡುವಂತೆ ಆದೇಶ ನೀಡಿದರು.

ಇದು ಪ್ರಪ್ರಥಮವಾಗಿ ಮೈಸೂರು ಜಿಲ್ಲೆಯ ಪಿರಿಯಾ ಪಟ್ಟಣ ತಾಲ್ಲೂಕು ಕೊಪ್ಪ ಗ್ರಾಮದಲ್ಲಿ ಸ್ಥಾಪಿಸಲಾಗಿರುವುದರಿಂದ ನಾವು ಈ ಮೇಲೆ ಕಾಣಿಸಿದ ಪದಾಧಿಕಾರಿಗಳೆಲ್ಲರು ಮನ ಪೂರ್ವಕವಾಗಿ ಕಾರ್ಯ ನಿರ್ವಹಿಸುತ್ತೇವೆ ಅನ್ನುವ ಭರವಸೆಯನ್ನು ಈ ಸಂದರ್ಭದಲ್ಲಿ ನೀಡುತ್ತೇವೆ ಎಂದು ತಿಳಿಸಿದ್ದರು.

ಇದಕ್ಕೆ ಮುಖ್ಯ ಪ್ರೇರಣೆಯಾಗಿ ಈಗಾಗಲೆ ಸುಳ್ಯ ತಾಲೂಕಿನಲ್ಲಿ ಪ್ರಚಲಿತದಲ್ಲಿರುವ ಗೌಡ ಗ್ರಾಮ ಸಮಿತಿಯನ್ನು ಕೊಡಗು ಸಂಗಾತಿ ಪತ್ರಿಕೆಯ ಗೌರವ ಸಂಪಾದಕರಾದ ಪಟ್ಟಡ ಪ್ರಭಾಕರ್‌ರವರು ಈ ಕುರಿತು ಮಾಹಿತಿ ನೀಡಿ ಸಾಕಷ್ಟು ಚರ್ಚಿಸಿ ಪರಿಚಯಿಸಿ ಸಹಕರಿಸಿದರು.

ಇವರಿಗೆ ಗೌಡ ಗ್ರಾಮ ಸಮಿತಿಯ ವತಿಯಿಂದ ವಂದನೆ ಯನ್ನು ಅರ್ಪಿಸಲಾಗಿತ್ತು.

ಅಂದಿನ ಸಭೆಯಲ್ಲಿ ಕುಯ್ಯಮುಡಿ ಪ್ರಸನ್ನ (ಮಣಿ) ಮತ್ತು ಕುದುಪಜೆ ಆನಂದರವರು ಉಪಸ್ಥಿತರಿದ್ದರು. ಸಭೆಯಲ್ಲಿ 30 (ಮುವತ್ತು ) ಮಂದಿ ಗೌಡ ಬಾಂಧವರು ನೆರೆದಿದ್ದರು. ಇವರಿಗೆ ಅಧ್ಯಕ್ಷರು ವಂದಿಸಿ ಮತ್ತು ಸಹಕಾರವನ್ನು ಕೋರಿದರು.

ಸಭೆಯು ಚೀಯಂಡಿ ಶ್ರೀಮತಿ ಶಾಂತಿಯವರ ವಂದನಾ ರ್ಪಣೆಯೊಂದಿಗೆ ಮುಕ್ತಾಯವಾಯಿತು.

- ಕುದುಪಜೆ ಬಸಪ್ಪ, ಕುಶಾಲನಗರ

## ಉದ್ಯೋಗ ಸಂಗಾತಿ : ಏರ್ ಫೋರ್ಸ್‌ನಲ್ಲಿ ಏರ್ ಮೆನ್ ಹುದ್ದೆ

ಭಾರತೀಯ ವಾಯುಸೇನೆಯು ಗ್ರೂಪ್ 'Y' ಟ್ರೇಡ್‌ಗಳಲ್ಲಿ ಏರ್‌ಮೆನ್ ಆಗಿ ನೇಮಕಾತಿಗೆ ಅರ್ಹರಾದ ಅವಿವಾಹಿತ ಪುರುಷ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಿದೆ. **ವಿದ್ಯಾರ್ಹತೆ :** SSLC (50% ಅಂಕಗಳೊಂದಿಗೆ) ಅಥವಾ PUC (50% ಅಂಕಗಳೊಡನೆ)ಪ್ರಾಯ: ಅಭ್ಯರ್ಥಿಗಳು 1-8-85 ಮತ್ತು 1-1-89 ರ ನಡುವೆ ಜನಿಸಿರಬೇಕು. **ಮೆಡಿಕಲ್ ಸ್ಟ್ಯಾಂಡರ್ಡ್‌ಗಳು :** ಕನಿಷ್ಟ ಎತ್ತರ 152.5 ಎದೆ - 75 cm (5 cm ಹಿಗ್ಗಿಸಲು ಸಾಧ್ಯವಾಗಬೇಕು) ತೂಕ, ಎತ್ತರ, ಮತ್ತು ಪ್ರಾಯಕ್ಕೆ ತಕ್ಕಂತೆ ಇರಬೇಕು. ದೃಷ್ಟಿ 6/36 6/9 (ಕರೆಕ್ಟೆಡ್) ಪವರ್ ಲಿಮಿಟ್ + 3.5 Dioptres ವರೆಗೆ (ಕನ್ನಡಕ್ಕೆ ಉಪಯೋಗಿಸುವ ಅಭ್ಯರ್ಥಿಗಳು ಇತ್ತೀಚೆಗೆ ವೈದ್ಯರಿಂದ ಪಡಕೊಂಡ ಚೀಟಿಯನ್ನು ತರಬೇಕು ) ಕಲರ್ ವಿಶನ್ CP II/III ಶ್ರವಣ ಶಕ್ತಿ : 600 cm ದೂರದಿಂದ ಪಿಸುಗುಟ್ಟುವಿಕೆ ಕೇಳುವಂತಿರಬೇಕು ದಂತ - 14 ಡೆಂಟಲ್ ಪಾಯಿಂಟ್ಸ್. ಅಭ್ಯರ್ಥಿಗಳು ಒಳ್ಳೆಯ ಆರೋಗ್ಯ ಹೊಂದಿರಬೇಕು. ವೈದ್ಯರಿಂದ ಕಿವಿ ಮತ್ತು ಹಲ್ಲು ಶುಚಿಗೊಳಿಸಿರಬೇಕು. ಆಯ್ಕೆಯಾಗುವ ಅಭ್ಯರ್ಥಿಗಳಿಗೆ ತರಬೇತಿಯ ಸಮಯದಲ್ಲಿ ಮಾಸಿಕ 2850 ರೂಪಾಯಿಗಳ ಸ್ಟೈಪೆಂಡ್ ನೀಡಲಾಗುತ್ತದೆ. ಉಚಿತ ವಸತಿ, ಬಟ್ಟೆ, ಊಟ, ವೈದ್ಯಕೀಯ ಸೌಲಭ್ಯಗಳು ಲಭಿಸುತ್ತವೆ.

ಆಯ್ಕೆಗಾಗಿ ಲಿಖಿತ ಪರೀಕ್ಷೆಯು ಆಗಸ್ಟ್/ ಸೆಪ್ಟೆಂಬರ್ ತಿಂಗಳಿನಲ್ಲಿ ನಡೆಯುವುದು ಇದರಲ್ಲಿ ಇಂಗ್ಲೀಷ್, ಮ್ಯಾತಮೆಟಿಕಲ್ ರೀಸನಿಂಗ್ ಇತ್ಯಾದಿ ವಿಷಯಗಳಿರುತ್ತವೆ. ನಂತರ ಫಿಸಿಕಲ್ ಫಿಟ್‌ನೆಸ್ ಟೆಸ್ಟ್ ಇರುತ್ತದೆ. ಇದರಲ್ಲಿ 8 ನಿಮಿಷಗಳೊಳಗೆ 1.6 cm ಓಟ ಇತ್ಯಾದಿಗಳಿರುತ್ತವೆ. ನಂತರ ಮೆಡಿಕಲ್ ಟೆಸ್ಟ್ ನಡೆಸಿ ಅಂತಿಮ ಆಯ್ಕೆ ಮಾಡಲಾಗುತ್ತದೆ. ಅರ್ಜಿಯಲ್ಲಿ ಪರೀಕ್ಷಾ ಕೇಂದ್ರ ಸೂಚಿಸಬೇಕು. ನಂತರ ಬದಲಾಯಿಸಲು ಆಗುವುದಿಲ್ಲ. ಪರೀಕ್ಷಾ ಕೇಂದ್ರ ಮುಂಬೈ, ಚೆನ್ನೈ, ಕೊಚ್ಚಿನ್ ಭುವನೇಶ್ವರ್.

ಆಸಕ್ತ ಅರ್ಹರು ಕೆಳಗೆ ನೀಡಲಾದ ಮಾದರಿಯಲ್ಲಿ ಅರ್ಜಿಯನ್ನು 30 cm x 20 cm ಅಳತೆಯ ಕಾಗದದಲ್ಲಿ ತಯಾರಿಸಿ ತುಂಬಿಸಬೇಕು. PP ಅಳತೆಯ ಇತ್ತೀಚಿನ ವರ್ಣದ ಫೋಟೋವನ್ನು ಅಂಟಿಸಬೇಕು. ಇನ್ನೆರಡು ಫೋಟೋಗಳನ್ನು ಎಡ ಮೇಲ್ತುದಿಯಲ್ಲಿ ಸ್ಟಾಪಲ್ ಮಾಡಬೇಕು. ಈ ಫೋಟೋ ಕೆಳಗಿನ ರೀತಿಯಲ್ಲೇ ತೆಗೆಯಬೇಕು.

"ಅಭ್ಯರ್ಥಿಯು ಕಪ್ಪು ಬಣ್ಣ ಸ್ಲೇಟಿನಲ್ಲಿ ಬಿಳಿ ಚಾಕ್‌ನಲ್ಲಿ ಹೆಸರು, ಹುಟ್ಟಿದ ದಿನಾಂಕ ಹಾಗೂ ಫೋಟೋ ತೆಗೆದ ದಿನಾಂಕ ಇವುಗಳನ್ನು ಬರೆದು ಆ ಸ್ಲೇಟನ್ನು ಎದೆಯ ಮುಂದೆ ಹಿಡಿದು ಬಣ್ಣದ ಫೋಟೋ (PP ಅಳತೆ) ತೆಗೆಸಬೇಕು. ಇಂತಹುದೇ ಇನ್ನೂ ನಾಲ್ಕು ಫೋಟೋಗಳನ್ನು ಅಭ್ಯರ್ಥಿಯು ಟೆಸ್ಟ್‌ಗೆ ಹಾಜರಾಗುವಾಗ ತೆಗೆದುಕೊಂಡು ಹೋಗಬೇಕು.

24 cm x 10 cm ಅಳತೆಯ ಸ್ವ ವಿಳಾಸದ ಕವರ್ ಸ್ಟಾಂಪ್ ಹಚ್ಚಬಾರದು ಅನ್ನು ಅರ್ಜಿಯ ಹಿಂಭಾಗದಲ್ಲಿ ಸ್ಟಾಪೆಲ್ ಮಾಡಬೇಕು. ಪ್ರಾಯ ಮತ್ತು ವಿದ್ಯಾರ್ಹತೆಯ ಪ್ರಮಾಣ ಪತ್ರಗಳ ಪ್ರತಿಗಳನ್ನು ಅರ್ಜಿಯ ಜೊತೆಗೆ ಸಲ್ಲಿಸಬೇಕು. ಅಭ್ಯರ್ಥಿಯ ಹೆಸರು ಮತ್ತು ಹುಟ್ಟಿದ ದಿನಾಂಕವನ್ನು ಕೆಳಗಿನ ರೀತಿಯಲ್ಲಿ ಬರೆಯಬೇಕು. ಅಂಕಗಳನ್ನು ಬರೆಯುವಾಗ ಸನ್ನಿಹಿತ ಮೌಲ್ಯ ಬರೆಯಬಾರದು. (49.9% ಇದ್ದರೆ 50% ಎಂದು ಬರೆಯಬಾರದು) ಕವರ್‌ನ ಮೇಲೆ "For Group 'Y' Trades" ಎಂದು ಬರೆಯಬೇಕು. ಅರ್ಜಿಯನ್ನು ಸಾಮಾನ್ಯ ಅಂಚೆಯಲ್ಲಿ ಕಳುಹಿಸಬೇಕು. ***ಅರ್ಜಿ ಸಲ್ಲಿಕೆಯ ಕೊನೆಯ ದಿನಾಂಕ : 22-03-2004***
***ವಿಳಾಸ : President Central Airmen Selection Board Post Box No. 11807, New Delhi - 110 010***

---

## ಪೂನಾದ ಹೈ ಎಕ್ಸ್ ಪ್ಲೋಸಿವ್ ಫ್ಯಾಕ್ಟರಿಯಲ್ಲಿ 60 ಹುದ್ದೆ

ಪುಣೆಯ ಖಡ್ಕಿಯಲ್ಲಿ ರಕ್ಷಣಾ ಮಂತ್ರಾಲಯದ ಅಡಿಯಲ್ಲಿ ಕಾರ್ಯಾಚರಿಸುತ್ತಿರುವ 'ಹೈ ಎಕ್ಸ್‌ಪ್ಲೋಸಿವ್ ಫ್ಯಾಕ್ಟರಿಯಲ್ಲಿ ಕೆಳಗೆ ಹೇಳಿರುವ ವಿವಿಧ ಹುದ್ದೆಗಳಿಗೆ ಅರ್ಹರಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಜಾಹೀರಾತು ನಂಬರ್ ಅರ್ಹತೆ : ಸ್ಟೆನೋಗ್ರಾಫರ್ i) SSLC ( ಇಂಗ್ಲೀಷ್ / ಹಿಂದಿ ii) ಸ್ಟೆನೋಗ್ರಫಿಯ ಜ್ಞಾನ iii) ಸ್ಟೆನೋಗ್ರಫಿಯಲ್ಲಿ 100 wpm ವೇಗ, ಟೈಪಿಂಗ್‌ನಲ್ಲಿ 40 wpm ವೇಗ ಇರಬೇಕು. ವಯೋಮಿತಿ - 18-27 ವರ್ಷ, ಲೋವರ್ ಡಿವಿಜನ್

14 ನೇ ಪುಟಕ್ಕೆ

# ನೀರೆಯರ ಮುಟ್ಟು ನಿಲ್ಲುವ ಹೊತ್ತು

ಮುಟ್ಟು ನಿಲ್ಲುವಿಕೆ ಮಹಿಳೆಯರಲ್ಲಿ ಅತ್ಯಂತ ಆತಂಕ ತರುವ ಅವಧಿ. ಸಾಮಾನ್ಯವಾಗಿ 50 ವರ್ಷದ ನಂತರ ಮುಟ್ಟು ನಿಲ್ಲುವಿಕೆ ಕಾಣಿಸಿಕೊಳ್ಳುವುದಾದರೂ 41ರಿಂದ 59 ವರ್ಷದ ಅವಧಿಯಲ್ಲಿ ಯಾವಾಗ ಬೇಕಾದರೂ ಇದು ನಡೆಯಬಹುದು. ಪ್ರಾಯ ಕಳೆದಂತೆಯೇ ಸ್ತ್ರೀಯರ ಅಂಡಾಶಯದ ಈಸ್ಟ್ರಾನ್ ಹಾಗೂ ಪ್ರೊಜೆಸ್ಟ್ರಾನ್ ಹಾರ್ಮೋನ್ ಉತ್ಪಾದನೆ ಮಾಡುವುದನ್ನು ನಿಲ್ಲಿಸುವಾಗ ಈ ಬದಲಾವಣೆ ಕಂಡುಬರುತ್ತದೆ.

ಉನ್ಮಾದ ಲಕ್ಷಣ (hysterectomy) ಹೊಂದಿರುವ ಕೆಲವು ಮಹಿಳೆಯರಿಗೆ ಶಸ್ತ್ರಕ್ರಿಯೆ ಮೂಲಕ ಕೂಡಾ ಮುಟ್ಟು ನಿಲ್ಲಿಸಲಾಗುತ್ತದೆ. ಕೆಲವು ಮಹಿಳೆಯರಲ್ಲಿ ಗರ್ಭಾಶಯವನ್ನು ತೆಗೆದು ಅಂಡಾಶಯವನ್ನು ಅದೇ ಸ್ಥಳದಲ್ಲಿ ಬಿಡುತ್ತಾರೆ. ಆದರೆ ಅಂತಹ ಸ್ತ್ರೀಯರಲ್ಲಿ ಅಂಡಾಶಯ ಈಸ್ಟ್ರಾನ್ ಉತ್ಪಾದನೆ ಮಾಡುವವರೆಗೂ ಋತುಚಕ್ರ ಮುಂದುವರಿಯುತ್ತದೆ. ಇನ್ನು ಕೆಲವು ಮಹಿಳೆಯರಲ್ಲಿ ಇದು ನಿಧಾನಗತಿಯ ಪ್ರಕ್ರಿಯೆ 6-12 ತಿಂಗಳು ಮುಟ್ಟು ಆಗದಿದ್ದರೆ ಮಾತ್ರ ಅಂತಹ ಮಹಿಳೆಯರಲ್ಲಿ ಮುಟ್ಟು ಸಂಪೂರ್ಣ ನಿಂತಿದೆಯೆಂದರ್ಥ.

*ಮುಟ್ಟು ನಿಲ್ಲುವ ಚಿಹ್ನೆ :*

ಋತುಕ್ರಿಯೆ ಅನಿಯಮಿತವಾಗಿ ಉಂಟಾಗುವುದು ಮುಖ್ಯ ಲಕ್ಷಣ. ಒಮ್ಮೆ ಋತುಕ್ರಿಯೆ ಅವಧಿಗೆ ಮುನ್ನವೇ ಆದರೆ ಕೆಲವೊಮ್ಮೆ ತಿಂಗಳು ಕಳೆದರೂ ಋತುಕ್ರಿಯೆ ಆಗದಿರಹುದು. ಋತುಸ್ರಾವ ಕೂಡಾ ಎಂದಿನ ಪ್ರಮಾಣದಲ್ಲಿ ಇರದಿರಬಹುದು.

ಋತು ಬಂಧದ ಬದಲಾವಣೆಗೂ ಮುನ್ನ ಬಿಸಿದ್ರವ ಮೈಯಿಂದ ವ್ಯಯವಾಗುತ್ತದೆ. ಹಾಗೆ ಬಿಸಿದ್ರವ ಸ್ರವಿಸುವಾಗ ಎದೆಯಿಂದ ಕುತ್ತಿಗೆಯ ಭಾಗದವರೆಗೆ ತೀವ್ರ ಬಿಸಿ ಹಬ್ಬಿದಂತಹ ಅನುಭವ ವಾಗಬಹುದು. ಹೀಗಾಗಿ ತಲೆನೋವು, ಖಿನ್ನತೆ ಉಂಟಾಗಬಹುದು.

ಯೋನಿ ಅಶಕ್ತವಾಗುತ್ತದೆ ಮತ್ತು ಸ್ರವಿಸುವ ದ್ರವದ ಪ್ರಮಾಣ ಕಡಿಮೆಯಾಗುತ್ತದೆ. ಲೈಂಗಿಕ ಕ್ರಿಯೆ ಸಂದರ್ಭದಲ್ಲಿ ಬಾಧೆ ಇರಬಹುದು.

ಮುಟ್ಟು ನಿಲ್ಲುವ ಸಂದರ್ಭದಲ್ಲಿ ಈಸ್ಟ್ರಾನ್ ಕೊರತೆ ಉಂಟಾಗುವುದರಿಂದ ಮೂತ್ರ ಕೋಶಕ್ಕೆ ಸಂಬಂಧಿಸಿದ ಖಾಯಿಲೆಗಳಿಗೆ ತುತ್ತಾಗುವ ಸಂಭವ ಹೆಚ್ಚು.

ಈ ಅವಧಿಯಲ್ಲಿ ಆಕೆ ಭಾವನಾತ್ಮಕ ಹತಾಶೆಗೆ ಒಳಗಾಗಬಹುದು. ಖಿನ್ನತೆ, ಗಾಢ ಚಿಂತೆ, ಆತಂಕ, ನಿದ್ರಾಹೀನತೆಗೆ ಒಳಗಾಗಬಹುದು.

***ಚಿಕಿತ್ಸೆ***

ಕೆಫೆನ್ ಹಾಗೂ ಆಲ್ಕೋಹಾಲ್ ಅಂಶವಿರುವ ಆಹಾರ ನಿಬಂಧಿಸುವುದು ಲೇಸು. ಖಾರದ ಆಹಾರ ,ಬಿಸಿ ಪೇಯಗಳು, ಸೂಪ್ ಇತ್ಯಾದಿ ವರ್ಜ್ಯ. ದೇಹದಲ್ಲಿ ಬಿಸಿ ದ್ರವದ ಉತ್ಪಾದನೆ ಯನ್ನು ಕಡಿಮೆ ಮಾಡಲು ಪ್ರೋಟೀನ್ ಯುಕ್ತ ಸೊಪ್ಪು, ಸೋಯಾ ಧಾನ್ಯದ ಆಹಾರ ಸೇವನೆ ಅತ್ಯಗತ್ಯ.

ದಿನ ನಿತ್ಯ ವಾಯುವಿಹಾರ, ಬೆಳಗಿನ ದೀರ್ಘನಡಿಗೆ ರೂಢಿಸಿಕೊಳ್ಳುವುದು ಉತ್ತಮ. ಇದು ದೇಹದ ತೂಕ ಕಡಿಮೆ ಮಾಡಿ ಮುಟ್ಟು ನಿಲ್ಲುವಿಕೆಯುಲ್ಲುಂಟಾಗುವ ಅಡ್ಡ ಪರಿಣಾಮವನ್ನು ತಡೆಯುತ್ತದೆ.

ಕೆಲವರ ದೇಹ ಪ್ರಕೃತಿಗೆ ವಿಟಮಿನ್ ಇ ಹಾಗೂ ಬಿ ಯುಕ್ತ ಪೌಷ್ಟಿಕಾಂಶಗಳು ಸಹಾಯ ಮಾಡುತ್ತವೆ. ಇದು ದೇಹದ ಬಿಸಿ ದ್ರವ ಉತ್ಪಾದನೆಯನ್ನು ಕಡಿಮೆ ಮಾಡುತ್ತದೆ.

ಮುಟ್ಟು ನಿಂತ ನಂತರದ ದುಷ್ಪರಿಣಾಮಗಳನ್ನು ತಡೆಯಲು ಡಿ ಯುಕ್ತ ವಿಟಮಿನ್‌ಹಾಗೂ ಕ್ಯಾಲ್ಸಿಯಂ ಪೂರಕ ಆಹಾರದ ಸೇವನೆ ಸೂಕ್ತ.

ಇದಕ್ಕೆ ಹಾರ್ಮೋನು ಬದಲಿಕೆ ಚಿಕಿತ್ಸೆ (ಹಾರ್ಮೋನ್ ರೀಪ್ಲೇಸ್‌ಮೆಂಟ್ ಥೆರಪಿ) ಕೂಡಾ ಲಭ್ಯ. ಮುಟ್ಟು ನಿಲ್ಲುವಿಕೆಯ ಅಡ್ಡ ವ್ಯಾಧಿಯನ್ನು ತಡೆಯಲು ಈಸ್ಟ್ರಾನ್, ಪ್ರೊಜೆಸ್ಟ್ರಾನ್, ಟಿಬ್ಲಾನ್ ಯುಕ್ತ ಔಷಧವನ್ನು ನೀಡಲಾಗುತ್ತದೆ. ಆದರೆ ವೈದ್ಯರ ಸಲಹೆ ಇಲ್ಲದೆ ಇವುಗಳ ಸೇವನೆ ಸಲ್ಲದು.

-ಸಂಗಾತಿ

## ಒಳ ಚರಂಡಿ ಮಂಡಳಿ ಅಧ್ಯಕ್ಷರಾಗಿ ಚಂದ್ರಕಲಾ ನೇಮಕ



ಕೊಡಗು ಜಿಲ್ಲೆಯ ಹೆಬ್ಬಾಲೆ ಜಿಲ್ಲಾ ಪಂಚಾಯ್ತಿ ಕ್ಷೇತ್ರದ ಸದಸ್ಯರಾಗಿರುವ ಕೆ. ಪಿ. ಚಂದ್ರಕಲಾ ಅವರನ್ನು ತಕ್ಷಣದಿಂದಲೇ ಜಾರಿಗೆ ಬರುವಂತೆ ರಾಜ್ಯ ಸರ್ಕಾರವು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯ ಅಧ್ಯಕ್ಷರನ್ನಾಗಿ ನೇಮಕ ಮಾಡಿ ಆದೇಶ ಹೊರಡಿಸಿದರು.

ಈ ಹಿಂದೆ ಮಂಡಳಿಯ ಅಧ್ಯಕ್ಷರಾಗಿದ್ದ ಲಿಂಗಪ್ಪ ಅವರನ್ನು ಅಧ್ಯಕ್ಷ ಸ್ಥಾನದಿಂದ ತೆರವುಗೊಳಿಸಿ ಈ ನೇಮಕ ಮಾಡಲಾಗಿದೆ ಎಂದು ತಿಳಿದು ಬಂದಿದೆ.




**ಸಂಗಾತಿ ಪತ್ರಿಕೆಯನ್ನು ಒಲೆಗೊಂದರಂತೆ ಕೊಂಡು ಓದಿ.**




ಒಂದು ಸಾವಿರಬಾರಿಯಾದರೂ ಪರವಾಗಿಲ್ಲ, ನಿನ್ನ ಗುರಿಯನ್ನು ಮುಟ್ಟಲು ಪ್ರಯತ್ನಿಸು. ಹಲವು ಬಾರಿ ಸೋತರೂ ಒಮ್ಮೆಯಾದರೂ ಯಶಸ್ಸನ್ನು ಪಡೆದೆ ತೀರುವೆ.

## ಮಕ್ಕಳಿಗಾಗಿ ಮಹಾಭಾರತ

# ಅರ್‌ಗ್‌ನ ಅರಮನೆ

ಧುರ್ಯೋಧನಂಗೆ ಭೀಮನ ಶಕ್ತಿ ಅರ್ಜುನನ ಚಾತುರ್ಯ ನೋಡಿ ಕೊಟ್ಟೆಕಿಚ್ಚ್ ಜಾಸ್ತಿ ಆತ್. ಅದರೊಟ್ಟಿಗೆ ಕರ್ಣ ಮತ್ತೆ ಶಕುನಿ ಕೆಟ್ಟ ಉಪದೇಶದಿಂದಾಗಿ ದುರ್ಯೋಧನ ಕೆಟ್ಟ ಗ್ಯಾನ ಶುರುಮಾಡ್ತ್. ಧೃತರಾಷ್ಟ್ರಂದ್ ಒಳ್ಳೆ ಮನಸ್ಸ್. ಆದರೆ ಅವನ ಮಕ್ಕಳ ಮೇಲೆ ಹತೋಟಿ ಇತ್ತ್‌ಲೆ. ತಮ್ಮನ ಮಕ್ಕಳ ಮೇಲೆ ಪ್ರೀತಿ ಇತ್ತ್. ಆದರೆ ಮಕ್ಕಳ ಮಾತ್‌ಕೇಳಿಕಂಡ್ ತಪ್ಪು ದಾರಿ ಹಿಡ್ತ್. ವಿದುರಂಗೆ ಕೌರವು ಮಾಡ್ನ ಯೋಜನೆ ಗೊತ್ತಾಗಿ ಪಾಂಡವುಕೆ ಗುಟ್ಟಾಗಿ ಹೇಳಿತ್ತ್. ಹಂಗಾಗಿ ಪಾಂಡವು ಜೀವ ಮುತ್ತನೆ ಬದ್‌ಕಿಕೆ ಆತ್.

ಪಾಂಡವರ ಅದೃಷ್ಟ ಹೀನ ತಪ್ಪಂತೇಳ್ರೆ ಹಸ್ತಿನಾಪುರ ಪಟ್ಟಣಲಿ ಎಲ್ಲವೂ ಅವರ ಗುಣ ನಡತೆನ ಹೋಗಳುತಿದ್ದದೆ ಅವು ಮಾಡ್ನ ದೊಡ್ಡ ತಪ್ಪು. ಅಲ್ಲದೆ ಯುದಿಷ್ಠಿರನೆ ರಾಜನಾಕೆ ಸರಿಯಾದವ, ಧೃತರಾಷ್ಟ್ರ ರಾಜ ಆಕೆ ಸಾಧ್ಯ ಇಲ್ಲೆಯಾಂಕೇಂತೇಳ್ರೆ ಅವ ಹುಟ್ಟುಕನೇ ಕುರುಡ. ಭೀಷ್ಮ ಮೊದಲೇ ಶಪಥ ಮಾಡಿ ತಾನ್ ರಾಜನಾದುಲೆತ ಹೇಳಿಟ್ಟು, ಹಂಗಾಗಿ ಯುಧಿಷ್ಠಿರಂಗೇ ಪಟ್ಟ ಕಟ್ಟಕು. ಅವನೇ ಕುರುವಂಶಕ್ಕೆ ಸರಿಯಾದವ. ಅವಂದೇ ದೇಶಲಿ ಶಾಂತಿ ನೆಲ್‌ಸುದು. ಈ ಮಾತ್‌ಗಳಂದ ಧುರ್ಯೋದನ ಇದನ್ನೆಲ್ಲಾ ಕೇಳಿ ಅವನ ಹುಳುಕು ಹೆಚ್ಚಿತ್.

ಧುರ್ಯೋದನ ಧೃತರಾಷ್ಟ್ರನೊಟ್ಟಿಗೆ ಅಂವ ಹಸ್ತಿನಾ ಪುರದ ಜನ ಹೇಳ್‌ದ್ರ ಹೇಳಿ ಪಾಂಡು ರಾಜನಾಗಿದ್ದರ್‌ಂದ ಅವನ ಮಂಜ ಯುಧಿಷ್ಠಿರನೇ ರಾಜನಾಕು. ನಿಮ್‌ಗೆ ಕಣ್ಣ್ ಕಾಣದ್ದರಿಂದ ನೀವು ರಾಜರಾಕೆ ಆದುಲೆ. ಜನಿಗೆ ನಿಮ್ಮ ಮೇಲೂ ಭೀಷ್ಮನ ಮೇಲೂ ಅಷ್ಟೊಂದು ಗೌರವ ಇಲ್ಲೆ. ಯುಧಿಷ್ಠಿರ ಏನಾರ್ ರಾಜ ಆತತ್ತೇಳ್ರೆ ನಮ್ಮ ಗತಿ ಏನು ನಮ್ಮ ವಂಶದ ಗತಿ ಏನ್ ? ಯುಧಿಷ್ಠಿರ ರಾಜ ಆದ ಮೇಲೆ, ಅವನನಂತ್ರ ಅವನ ಮಂಜ ಆಮೇಲೆ ಅವನ ಮಂಜ, ಹಾಂಗೆ ತಲೆಮಾರ್ ಮುಂದೆ ಹೋದ್ರೆ ನಾವು ನಮ್ಮ ಮಕ್ಕ ಮಕ್ಕಳ ಮಕ್ಕ ಅವು ಹಾಕಿದ ಕೂಳಿಗೆ ಕಾದ್‌ಕಂಡ್ ಬಡವು ಆಗಿ ಬಿದ್ದಿರೊಕು. ನೀನ್ ಹೇಳ್ದು ಎಲ್ಲಾ ಸರಿ ಆದರೆ ಪ್ರಜೆಗ ಅವರ ಕಡೆ ಮಾತಾಡ್‌ಕ ನ ಪ್ರಜೆಗಳ ವಿರೋಧ ಕಟ್ಟಿ ಕಣಕಾದುಲೆ. ಯುಧಿಷ್ಠಿರ ಒಳ್ಳೆಯಂವ. ಧರ್ಮಕ್ಕೆ ವಿರೋಧವಾಗಿ ಹೋಕಿಲೆ. ಅಂವ ಎಲ್ಲವರ್ನ ಪ್ರೀತಿಸಿದೆ. ಅಂವ ಅವನ ಅಪ್ಪನ ಎಲ್ಲಾ ಗುಣಗಳ ಹೊಂದಿಟ್ಟು. ದೇಶದ ಎಲ್ಲಾ ದಂಡನಾಯಕರ ಪ್ರೀತಿ ವಿಶ್ವಾಸನ ಪಾಂಡು ಪಡಕಂಡುಟ್ಟು. ಅವರ ವಿರೋಧ ಕಟ್ಟಕಣೆಕಾದುಲೆ. ನಾವೇನಾರ್ ಅವುಕೆ ವಿರೋಧ ಕಟ್ಟಿಕಂಡರೆ ಅವು ನಮ್ಮನ್ನ ಕೊಂದ್ ಹಾಕುವ ಅಥವಾ ದೇಶಂದ ಓಡ್ಸುವೊ. ಇದರ್ನೆಲ್ಲಾ ನಾವು ನಡಿಸಿಕೊಣಕು." ಈ ಮಾತ್ನ ಕೇಳಿ ಧುರ್ಯೋದನ ಹೇಳ್ತ್" ನಿಮ್ಮ ಹೆದರಿಕೆ ತಪ್ಪು, ಭೀಷ್ಮ ಯಾವ ಪಕ್ಷಕ್ಕೂ ಸೇರಿದವ. ಅಶ್ವಥಾಮ ನನ್ನನ್ನ ಪ್ರೀತಿಸಿದೆ. ಆದ್ರಂದ ಕೃಪಾಚಾರ್ಯ್ ಮತ್ತೆ ದ್ರೋಣಾಚಾರ್ಯ ಇಬ್ಬರು ನಮ್ಮ ಕಡೆ ಇದ್ದವೆ. ವಿಧುರ ಬಹಿರಂಗವಾಗಿ ಮಾಡ್ದು ಇಲ್ಲೆ. ಆದರಿಂದ ಪಾಂಡವರ್ನ ವಾರಣವತಕ್ಕೆ ಕಳ್ಸಿ, ನಾನ್ ನಿಮಿಗೆ ಹೇಳ್ದು ಯಾಕೆತೇಳ್ರೆ ನಂಗೆ ನನ್ನ ಕಯಿಂದ ಧುರ್ಯೋದನ ಶಕುನಿ ಮುಂತಾದವು ಸೇರಿ ಶಕುನಿನ ಗುರು ಕನಿಕಾನ ಧೃತರಾಷ್ಟ್ರನ ಹತ್ರ ಕಳ್ಸಿ ಅವ ಹೇಳ್ತ್" ಓ ರಾಜನೇ ನೀನ್ ನಿನ್ನ ಮತ್ತೆ ನಿನ್ನವರ್ನ ಪಾಂಡವರ ಒಳ್ಳೆತನದ ಹಾವಳಿಂದಾಗಿ ತೊಂದರೆ ಆದೆ. ಪಾಂಡವು ನಿನ್ನ ತಮ್ಮನ ಮಕ್ಳ. ಅವು ನಿನ್ನ ರಕ್ತಸಂಬಂಧಿ ಆದರೂ ಅವು ನಿಂಗೆ ತೊಂದರೆನೇ ಕೊಡಿಕಾಗದ್ ಅಲ್ಲದೆ ಅವು ಬಾಳ ಗಟ್ಟಿ ಕುಳ"ಕನಿಕಾನ ಮುಂದರಿಸಿತ್.

"ನಾನ್ ಹೇಳುದಾದರೆ ಒಬ್ಬರನೊಬ್ಬ ಬಲಶಾಲಿ ಯಾಗಿರಕು. ಅಂವನ ಬಲನ ಅವನ ನಡತೆಲೂ ಕಾಣೆಸೋಕು. ಇಲ್ಲದಿದ್ದರೆ ಪ್ರಯೋಜನ ಇಲ್ಲೆ. ಇದಕ್ಕೆ ಒಂದು ಬುದ್ಧಿವಂತಿಕೆಯ ಯೋಜನೆ ಗುಟ್ಟುಲೆ ಮಾಡಕು. ಕೆಟ್ಟದರ ಬೇಗನೇ ತೆಗೆಯಕು. ಮುಳ್ಳು ಶರೀರಲಿ ಇದ್ದರೆ ಆದ್ ಕಡೆಗೆ ದೊಡ್ಡ ಬೆಂಕಿ ಆದೆ. ಒಬ್ಬ ಶಕ್ತಿ ಇರುವ ಶತ್ರುನ ಬೇಗ ಇಲ್ಲದಂಗೆ ಮಾಡ್ದು ಒಳ್ಳೆದ್. ಅಂತವರ ಮೇಲೆ ಕರುಣೆ ತೋರಿಸುದು ಮುಟ್ಟಾಳತನ. ಓ ರಾಜನೆ ನೀನ್ ನಿನ್ನ ಪಾಂಡುನ ಮಕ್ಕಳಿಂದ ರಕ್ಷಿಸಿಕೊಂಬದ್ ಒಳ್ಳೆದ್. ಅವು ಬಾಳಾ ಬಲಶಾಲಿಗ ಆಗಿ ಒಳೊ".

ದುರ್ಯೋಧನ ಧೃತರಾಷ್ಟ್ರನೊಟ್ಟಿಗೆ ಹಿಂಗೆ ಹೇಳ್ತ್"ನಾನ್ ಜನರ ಪ್ರೀತಿ ವಿಶ್ವಾಸನ ಪಡ್‌ಕೊಂಡಳೇ. ನೀವು ಪಾಂಡವರ್ನ ವಾರಣಾವತಿ ಕಳ್ಸ್‌ವಂಗೆ ಏರ್ಪಾಡ್ ಮಾಡ್ರೆಪಟ್ಟಣದ ಮತ್ತೆ ಇಡೀ ರಾಜ್ಯದ ಜನ ನಮ್ಮ ಕಡೆಗೆ ಬಂದವೆ. ಪಾಂಡವು ಅಲ್ಲಿಗೆ ಹೋದರೆ ಇಲ್ಲಿ ಅವುಕೆ ಯಾರೂ ಸ್ನೇಹಿತರ್ ಇರ್ದುಲೆ . ಅವು ಬಹುಶಃ ಹಿಂದಕ್ಕೆ ಬಂದರೂ ಅವುಕೆ ಶಕ್ತಿ ಇರ್ದುಲೆ.

16 ನೇ ಪುಟಕ್ಕೆ



ದಿll ಪಾಂಡನ ಜಿ. ರಾಮಯ್ಯ
ಜನನ : 1912 ಮರಣ : 19-1-2004

## ಕೃತಜ್ಞತೆ ಮತ್ತು ವಂದನೆಗಳು

ಶ್ರೀ ಪಾಂಡನ ರಾಮಯ್ಯನವರು ದಿನಾಂಕ 19-1-2004 ರ ಸೋಮವಾರ ವೈಕುಂಠವಾಸಿಯಾದ ಸಂದರ್ಭದಲ್ಲಿ ನಮ್ಮ ಬಂಧುಗಳು, ಕುಟುಂಬಸ್ತರು, ಆಪ್ತರು, ಹಿತೈಷಿಗಳು, ನೆಂಟರಿಷ್ಟರು, ಬಂದು ಮೃತರ ಎಲ್ಲಾ ಅಪರ ಕ್ರಿಯಾದಿಗಳಲ್ಲಿ ಪಾಲ್ಗೊಂಡು ಸಹಕರಿಸಿದ ನಿಮ್ಮೆಲ್ಲರ ಪ್ರೀತಿ ವಿಶ್ವಾಸ ಸಹಕಾರಗಳಿಗೆ ನಾವುಗಳು ಚಿರಋಣಿಗಳು.
ಪತ್ನಿ : ಕೆಂಚಮ್ಮ, ಮಗ: ಪ್ರಕಾಶ್, ಸೊಸೆ: ಪುಷ್ಪವೇಣಿ, ಮಕ್ಕಳು, ಅಳಿಯಂದಿರು, ಮೊಮ್ಮಕ್ಕಳು, ಬಂಧುಗಳು ಫೋನ್ : 241554, ಮರಗೋಡು.

ಪ್ರಕಟಣೆ : ಪಾಂಡನ ಪ್ರಕಾಶ್

*ವಿ. ಸೂ.: ಮರಗೋಡು ಗ್ರಾಮ ಪಂಚಾಯಿತಿಯ ಪ್ರಥಮ ಸದಸ್ಯರಾಗಿಯೂ, ಮರಗೋಡು ಭಾರತಿ ಪ್ರೌಢಶಾಲೆಯ ಪ್ರಥಮ ನಿರ್ದೇಶಕರಾಗಿಯೂ, ಮರಗೋಡು ಸಮೀಪ ಹುಲಿತಾಳ ಶಾಲೆಯ ಪ್ರಥಮ ಅಧ್ಯಕ್ಷರಾಗಿಯೂ, ಸಮಾಜ ಸೇವಕರಾಗಿಯೂ, ದಾನಿಗಳಾಗಿಯೂ, ಜನಾನುರಾಗಿಯಾಗಿ ಸೇವೆ ಸಲ್ಲಿಸಿದ ಕೀರ್ತಿ ಇವರದು.*

*-ಸಂಗಾತಿ..*

## ಅಯೋಧ್ಯೆಯಲ್ಲಿ ಉತ್ಖನ್ನದ ವೇಳೆ ಲಭಿಸಿದ ವಸ್ತುಗಳ ವಿವರಗಳು

1. Fragment of a unique Vishnu image from the hoard but now in the custody of local police. It depicts a Chakrapurusha holding a wheel in his hand and standing at an angle
2. Top-left member of the jala or mesh like shikhara decoration.
3. A fragment of the jala showing floral motif carved by the 'stencil' technique.
4. Door-jamb with meandering floral pattern carved in the 'stencil'technique.
5. The dvarashakha or door-jamb with the images of devakanyas, ganas and advarapala. Black stone.
6. The image of Shiva-Parvati, largely broken
7. Corner chhajja or sun-shade with stylised lotus-petal mouldings.
8. Another type of corner cornice or chhajja with near-natural lotus petals and beaded border.
9. Part of the chhajja or cornice stone carved like a tile with central rib, apparently a copy of the wooden architecture.
10. The capital of a pillar
11. The Bhumi Amalaka which had crowned the shikhara of a subsidiary shrine projecting partially from the face of the main shikhara
12. The image of dvarapala with irita mukuta on the head and vanamala in the neck carved on a door-jamb decorated with heavenly damsels, devakanyas and ganas. It is a Vaishnavite deity. Black stone. Blow up of a panel from the dvarashakha.
13. Terracotta figurine
14. Terracotta figurines : the head of a devata and the bust of a yaksha.

## ವಂದನೆಗಳು / ಅಭಿನಂದನೆಗಳು

"ಒಂದು ಜನಾಂಗದ ಅಭಿವೃದ್ಧಿಯೇ ಒಂದು ದೇಶದ ಪ್ರಗತಿ" ಪತ್ರಿಕೆಯೇ ಜನಾಂಗದ ಮತ್ತು ನಾಡಿನ ಬೆನ್ನೆಲುಬು ಎಂದು ಭಾವಿಸಿ 1-4-1997 ರಿಂದ ಪತ್ರಿಕೆಯನ್ನು ನಾವುಗಳು ಸಮರ್ಪಿಸಿದ್ದೇವೆ. ಅದು 7 ವರುಷಗಳನ್ನು ಪೂರೈಸಿ, 8ನೇ ವರುಷಕ್ಕೆ ಕಾಲಿಟ್ಟು, ಹರುಷ ನೀಡಲು ಸಹಕರಿಸಿದ ಸರ್ವರಿಗೂ, ಹಿತೈಷಿ ಅಭಿಮಾನಿಗಳಿಗೂ, ಕಷ್ಟಕಾಲದಲ್ಲಿ ಸಲಹೆ ಸೂಚನೆ ನೀಡಿ ಬೆನ್ನು ತಟ್ಟಿ ಅಭಿನಂದಿಸಿದ ನಮ್ಮ ಪೂಜ್ಯರೆಲ್ಲರಿಗೂ ಕೊಡಗು ಸಂಗಾತಿ, ಪಾಕ್ಷಿಕ ಪತ್ರಿಕೆಯ ಪರವಾಗಿ ಅಭಿನಂದನೆಗಳು.

ಪಟ್ಟಡ ಶೀಲಾಮಣಿ, ಸಂಪಾದಕಿ ಮತ್ತು ಪಟ್ಟಡ ಪ್ರಭಾಕರ, ಗೌರವ ಸಂಪಾದಕರು ಹಾಗೂ ಆಡಳಿತ ಮಂಡಳಿ.

**ದಿನಾಂಕ : 7-3-2004**

Reg. No. KA/SK/MYS/88/2003 - 05 RNI No. : 10-01-96 TCI Kar. 09592

## ಅಯೋಧ್ಯ ಐತಿಹಾಸಿಕ ಮಂದಿರ ಕುರುಹುಗಳು


7


8


9


10


11


12


13


14

**Kodagu Sangathi** Kannada Fortnightly Edited, Published, Printed by **Pattada Sheelamani, # 12058 "Sangathi Nilaya", Vijayanagar IV Stage, II Phase, Hinkal Post, Mysore - 570017. ☎ : 0821/2404290.** And Printed at Sri Guru Raghavendra Printers, 489, Devamba Agrahara, K. R. Mohalla, Mysore - 24. ☎ : 0821/2431792.